## ಮೈಸೂರು ನಗರ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು



**ಶಕುಂತಲ ಜಯದೇವ ಶರಣ ಪ್ರಶಸ್ತಿ –೨೦೧೯**, ದಿನಾಂಕ:೧೫.೧೨.೨೦೧೯
ದಿವ್ಯ ಸಾನಿಧ್ಯ: ಪರಮಪೂಜ್ಯ ಜಗದ್ಗುರು ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು,
ಪ್ರಶಸ್ತಿ ಪುರಸ್ಕೃತರು: ಡಾ. ಲತಾ ರಾಜಶೇಖರ್, ಡಾ. ಬಸವರಾಜ ಕಲ್ಗುಡಿ, ವೇದಿಕೆಯಲ್ಲಿ: ಜಯಾಗೌಡ,
ಶಕುಂತಲ ಜಯದೇವ, ಪ್ರೊ.ಓ.ಎಲ್. ನಾಗಭೂಷಣಸ್ವಾಮಿ, ಅಪ್ಪಾರಾವ ಅಕ್ಕೋಣೆ, ಚಂದ್ರಕಾಂತ ಬೆಲ್ಲದ, ಎಂ. ಚಂದ್ರಶೇಖರ್

## ತುಮಕೂರು ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು



**ಪಾವಗಡ ತಾಲೂಕು ಎರಡನೇ ಶರಣ ಸಾಹಿತ್ಯ ಸಮ್ಮೇಳನ**, ದಿನಾಂಕ:೧೨.೧೨.೨೦೧೯
ಸರ್ವಾಧ್ಯಕ್ಷರು: ಡಾ.ವಿ.ಆರ್. ಚಲುವರಾಜನ್, ವೇದಿಕೆಯಲ್ಲಿ: ಎಂ.ಜಿ. ಸಿದ್ಧರಾಮಯ್ಯ, ಅಂತರಗಂಗೆ ಶಂಕರಪ್ಪ,
ಬ್ಯಾಡನೂರು ಶಾಂತವೀರಪ್ಪ, ವೈದ್ಯ ತಿಪ್ಪೇರುದ್ರಯ್ಯ, ಬಿ.ಇ.ಒ. ಗಂಗಾಧರಯ್ಯ, ಕಟ್ಟಾ ನರಸಿಂಹಮೂರ್ತಿ
ಡಾ. ಚಿತ್ತಯ್ಯ ಪೂಜಾರ್, ಬ್ಯಾಡನೂರು ಚೆನ್ನಬಸವಣ್ಣ



# ಮಹಾಮನೆ

ಜನವರಿ ೨೦೨೦ ಸಂಪುಟ : ೨೨ ಸಂಚಿಕೆ : ೦೬



ಪ್ರಕಾಶಕರು
ಡಾ. ಗೊ.ರು. ಚನ್ನಬಸಪ್ಪ
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
ಮೈಸೂರು

**ಆಡಳಿತ ಕಾರ್ಯಾಲಯ**
೧ನೆಯ ಮುಖ್ಯರಸ್ತೆ,
ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ
೮ನೆಯ ವಿಭಾಗ, ಜಯನಗರ
ಬೆಂಗಳೂರು - ೫೬೦ ೦೭೦
ದೂ: ೦೮೦ - ೨೨೯೭ ೦೧೨೫
**E-mail:**
mahamanemagazine@gmail.com
abssp.reg@gmail.com

ಸಂಚಿಕೆಯ ಅಂತರಂಗ

# ಬಿನ್ನಹ

ಮಹಾಮನೆಯ ಎಲ್ಲ ಓದುಗ ಬಳಗಕ್ಕೆ ೨೦೨೦ನೆಯ ಹೊಸವರ್ಷದ ಹಾರ್ದಿಕ ಶುಭಾಶಯಗಳು.

ಹೊಸ ವರ್ಷದ ಈ ತಿಂಗಳಲ್ಲಿ ಮೂವರು ಶರಣರ ಶರಣೋತ್ಸವಗಳು ಕಾಣಬರುತ್ತವೆ. ಜೇಡರ ದಾಸಿಮಯ್ಯ, ಸಿದ್ಧರಾಮೇಶ್ವರ ಹಾಗೂ ಮೇದರ ಕೇತಯ್ಯ ಇವರು ತಮ್ಮ ಕಾಯಕಗಳಿಂದ, ವಚನ ರಚನೆಯಿಂದ ಮತ್ತು ತಮ್ಮ ಅಸಾಧಾರಣ ವ್ಯಕ್ತಿತ್ವಗಳಿಂದ ಪ್ರಸಿದ್ಧರಾದವರು. ಅವರ ಸ್ಮರಣೆಯನ್ನು ಮಹಾಮನೆ ಅತ್ಯಂತ ಪ್ರೀತಿಯಿಂದ ಇಲ್ಲಿ ದಾಖಲಿಸಲು ಬಯಸುತ್ತದೆ. ಆ ಶರಣರನ್ನು ಕುರಿತು ಪರಿಚಯಾತ್ಮಕ ಬರವಣಿಗೆಗಳು ಈ ಮಾಸಿಕದಲ್ಲಿ ಅಳವಟ್ಟಿವೆ.

ಕಾಯಕ-ದಾಸೋಹಗಳು ಶರಣರ ಬದುಕಿನ ಎರಡು ಮಹತ್ವದ ಬದುಕಿನ ದಾರಿಗಳು. ಕಾಯಕ ಶರಣ ಚಳವಳಿಯ ಮೂಲತತ್ವಗಳಲ್ಲಿ ಒಂದು. ಧಾರ್ಮಿಕ ಚಳವಳಿ ಸಾಮಾಜಿಕ ಬದ್ಧತೆಯನ್ನು ಸಾಧಿಸಿಕೊಂಡು ಒಂದು ಆರೋಗ್ಯಪೂರ್ಣ ಸಮಾಜವನ್ನು ರೂಪಿಸಲು ಆಯ್ಕೆ ಮಾಡಿಕೊಂಡ ಕಾಯಕ ಸಿದ್ಧಾಂತ - ಶರಣರ ಅತ್ಯಂತ ಮಹತ್ವದ ಕಾಣಿಕೆಯಾಗಿದೆ. ಕಾಯಕಕ್ಕೆ ಅನೇಕ ನೆಲೆಗಟ್ಟುಗಳಿವೆ. ಸಾಮಾಜಿಕ ವ್ಯಕ್ತಿಗಳನ್ನು ಕ್ರಿಯಾಶೀಲವಾಗಿ ಇಡುವಂತೆಯೇ, ಆರ್ಥಿಕವಾಗಿ ಸದೃಢನಾಗಿಯೂ ಸ್ವಾವಲಂಬಿಯಾಗಿ ಇಡುವ ಮೂಲಕ ವ್ಯಕ್ತಿಯ ವ್ಯಕ್ತಿತ್ವದಲ್ಲಿ ಸ್ವಾಭಿಮಾನ ತಾನೇ ತಾನಾಗಿ ಮೈದಾಳುತ್ತದೆ. ಕಾಯಕ ಆ ಮೂಲಕ ಒಂದು ಸಾಮಾಜಿಕ ಮೌಲ್ಯವಾಗಿ ರೂಪುಗೊಳ್ಳಲು ಕಾರಣರಾದರು. ಆರ್ಥಿಕ ಅಸಮಾನತೆಯ ಅಂತರ ಕಾಯಕದಿಂದ ದೂರವಾಗತೊಡಗುತ್ತದೆ. ಧಾರ್ಮಿಕ ಆಯಾಮ ಹಿನ್ನೆಲೆಗೆ ಸರಿದು ಆರ್ಥಿಕ, ಸಾಮಾಜಿಕ ವಿಷಯಗಳು ಮುನ್ನೆಲೆಗೆ ಬಂದವೋ ಎಂದು ಭಾಸವಾಗುತ್ತದೆ. ಆದರೆ ಧಾರ್ಮಿಕ ತಳಪಾಯ ಎಷ್ಟು ಸದೃಢವೆಂದರೆ ಅದು ಒಂದು ವಿಶಾಲ ವೇದಿಕೆಯನ್ನು ಕಲ್ಪಿಸಿರುವುದು ವಿಶೇಷವಾಗಿ ಕಂಡುಬರುತ್ತದೆ.

ಶರಣರು ದಾನ ಸ್ವೀಕಾರ, ದಾನ ನೀಡುವಿಕೆ ಎರಡನ್ನೂ ಪುರಸ್ಕರಿಸಿಲ್ಲ. ಸತ್ಯ ಶುದ್ಧ ಕಾಯಕದ ಮೂಲಕ ಗಳಿಸಿದ್ದನ್ನು ದಾಸೋಹದ ಮೂಲಕ ಹಂಚಿಕೊಳ್ಳುವ ಮೂಲಕ ಕೆರೆಯ ನೀರನು ಕೆರೆಗೆ ಚೆಲ್ಲುವ ದಾಸೋಹ ಮೂರ್ತಿಗಳಾದರು. ಕಾಯಕ ಅವರಿಗೆ ಕೇವಲ ದುಡಿಮೆಯ ದಾರಿಯಲ್ಲ, ಅದರಲ್ಲಿ ಉದಾತ್ತ ಧ್ಯೇಯವಿದೆ, ನಿಸ್ವಾರ್ಥ ನಿಷ್ಠೆ ಇದೆ. ಕಾಯಕದ ಜೊತೆಯೇ ತಳುಕು ಹಾಕಿಕೊಂಡಿರುವ ದಾಸೋಹ ಸಂಪಾದನೆಯನ್ನು ಹೇಗೆ ವೆಚ್ಚ ಮಾಡಬೇಕೆಂಬುದಕ್ಕೆ ಮಾರ್ಗಸೂಚಿಯಾಗಿದೆ. ತಾನು ಮಾಡಿದ ಸಂಪಾದನೆಯನ್ನು ತಮಗಾಗಿ, ತನ್ನ ಕುಟುಂಬಕ್ಕೆ ಮಾತ್ರ ವಿನಿಯೋಗಿಸದೆ ಜಂಗಮ ಸೇವೆಗೆ ವಿನಿಯೋಗಿಸಬೇಕೆಂಬ ತತ್ವ ವ್ಯಕ್ತಿಯನ್ನು ಸಾಮಾಜಿಕ ಬದ್ಧನಾಗಿಸುತ್ತದೆ. ತಾನು ಮಾಡಿದೆ, ತನ್ನಿಂದ ಆಯಿತು ಎಂಬ ಅಹಂಕಾರದ ಎಳೆಯೂ ದಾಸೋಹ ಭಾವದಲ್ಲಿ ನುಸುಳಲು ಸಾಧ್ಯವಿಲ್ಲ. ಕಾರ್ಯದಲ್ಲಿ ವ್ಯಕ್ತಿಯ ಸ್ವಾಭಿಮಾನ ಅನ್ಯರ ಮುಂದೆ ಕೈಯೊಡ್ಡುವ ಅಸಹಾಯಕತೆಯಿಂದ ದೂರ ನಿಲ್ಲಿಸುತ್ತದೆ.

ವೃತ್ತಿಗಳಲ್ಲಿ ಕೆಲವು ಮೇಲು, ಕೆಲವು ಕೀಳು ಎಂಬ ಸಾಮಾಜಿಕ ತಾರತಮ್ಯ ಎಲ್ಲ ಕಾಲದಲ್ಲಿಯೂ ಇದ್ದಿತೆಂದು ಕಾಣುತ್ತದೆ. ಸ್ವಸ್ಥ ಸಮಾಜಕ್ಕೆ ಸ್ವಯಂಪೂರ್ಣ ಸಮಾಜಕ್ಕೆ ಎಲ್ಲ



ಕಾಯಕಗಳೂ ಅಷ್ಟೇ ಅತ್ಯಗತ್ಯ. ಶರಣ ಚಳುವಳಿಯಲ್ಲಿ ಶರಣರ ಕಾಯಕಗಳ ಹೆಸರು ಅಭಿಮಾನಪೂರ್ಣವಾಗಿ ಮುನ್ನೆಲೆಗೆ ಬಂದಿರುವುದು ಗಮನಿಸಬೇಕಾದ ಅಂಶವಾಗಿದೆ. ದೈಹಿಕ ಶ್ರಮ ಅಥವಾ ಮಾನಸಿಕ ಶ್ರಮ ಎರಡಕ್ಕೂ ಅದರದೇ ಆದ ಬೆಲೆ ಇದ್ದಿತು. ಹೆಚ್ಚು ಪ್ರತಿಫಲ ಬರುವ ಕಾರ್ಯಕ್ಕೆ ಗೌರವದ ಸ್ಥಾನ ಕಾಯಕಗಳಿಗೂ ಅದರದೇ ಆದ ಪ್ರಾಮುಖ್ಯ ಮತ್ತು ಅಗತ್ಯ ಇತ್ತು. ಈ ಕಾರಣದಿಂದ ಎಲ್ಲ ವೃತ್ತಿಕಾರರು ತಮ್ಮ ತಮ್ಮ ವೃತ್ತಿಗಳನ್ನು ಹೆಸರಿನ ಆದ್ಯ ಭಾಗದಲ್ಲಿ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಜೇಡರ ದಾಸಿಮಯ್ಯ, ಮೇದರ ಕೇತಯ್ಯ, ಕನ್ನಡಿ ಕಾಯಕದ ಅಮುಗಿ ದೇವಯ್ಯ, ಮಡಿವಾಳ ಮಾಚಿದೇವ, ಮಾದಾರ ಧೂಳಯ್ಯ ಹೀಗೆ ತಮ್ಮನ್ನು ಕರೆದುಕೊಳ್ಳಲು ಹೆಮ್ಮೆ ಇದೆ. ಶರಣೆಯರೂ ಕೂಡ ಅಷ್ಟೇ ಹೆಮ್ಮೆಯಿಂದ ತಮ್ಮ ಗಂಡಂದಿರ ಕಾಯಕ ವೃತ್ತಿಯನ್ನು ತಮ್ಮ ವೃತ್ತಿಯನ್ನೂ ಹೆಮ್ಮೆಯಿಂದ ಹೇಳಿಕೊಂಡಿದ್ದಾರೆ. ಆಯ್ದಕ್ಕಿ ಲಕ್ಕಮ್ಮ, ಕದಿರ ಕಾಯಕದ ಕಾಳವ್ವೆ, ಕದಿರ ರೆಮ್ಮವ್ವೆ, ಕೊಟ್ಟಣದ ಸೋಮಮ್ಮ, ಮೋಳಿಗೆ ಮಹಾದೇವಿ, ಸೂಳೆ ಸಂಕವ್ವೆ ಹೀಗೆ ಮುಂದುವರಿಯುತ್ತದೆ. ಶರಣರಲ್ಲಿ ಕಾಯಕದ ವಿಷಯ ಬಂದಾಗಲೂ ಭಿನ್ನ ಭಾವವಿಲ್ಲ. ಕಾಯಕನಿಷ್ಠೆ ಎಷ್ಟು ಗಾಢವೆಂದರೆ **'ಕಾಯಕದಲ್ಲಿ ನಿರತನಾದಡೆ ಗುರುದರ್ಶನವಾದರೂ ಮರೆಯಬೇಕು. ಲಿಂಗಪೂಜೆಯಾದರೂ ಮರೆಯಬೇಕು'** ಎಂಬ ನಿಷ್ಠೆ ಅನುಕರಣೀಯವಾದುದಾಗಿದೆ. ಶರಣ ಚಳವಳಿ ಉನ್ನತ ಸ್ತರಕ್ಕೆ ಏರಲು ಕಾಯಕ ತತ್ವ ಮಹತ್ವದ ಕಾಣಿಕೆಯನ್ನೂ ನೀಡಿದೆ.

ಕಾಯಕ ತತ್ವ ಕೇವಲ ಶರಣರ ಚಳವಳಿಯ ಕಾಲಕ್ಕೆ ಮಾತ್ರ ಸೀಮಿತವಾದುದಲ್ಲ. ಅದು ಎಲ್ಲ ಕಾಲಕ್ಕೂ ಎಲ್ಲ ಜನಾಂಗಕ್ಕೂ ಎಲ್ಲ ದೇಶಗಳಿಗೂ ಅನ್ವಯವಾಗಬಹುದಾದ ಸಾರ್ವಕಾಲಿಕ ತತ್ವವಾಗಿದೆ. ಅದರ ನೆರಳಿನಂತೆ ಅನುಸರಿಸಿಕೊಂಡು ಬರುವ ದಾಸೋಹ ಇಡೀ ಶರಣ ಚಳವಳಿಗೆ ವ್ಯಾಪಕ ಸಾಮಾಜಿಕ ಹೊಣೆಗಾರಿಕೆಯನ್ನು ದೊರಕಿಸಿಕೊಡುತ್ತದೆ. ಹನ್ನೆರಡನೆಯ ಶತಮಾನದಲ್ಲಿಯೇ ಇಷ್ಟೊಂದು ಮುನ್ನೋಟದಿಂದ ಚಿಂತಿಸಿದ ಶರಣರ ದೂರದೃಷ್ಟಿ ಅದ್ಭುತ ಆಲೋಚನೆಯಾಗಿದೆ. ಸ್ತ್ರೀಪುರುಷರನ್ನು ಒಳಗೊಳ್ಳುವ ಈ ತತ್ವ ವಿಶ್ವಮಾನ್ಯವಾದುದಾಗಿದೆ. ಮಾನವನ ಕ್ರಿಯಾಶೀಲತೆಯನ್ನು ಬಡಿದೆಬ್ಬಿಸಿ ಸೋಮಾರಿತನವನ್ನು ಸಂಪೂರ್ಣವಾಗಿ ನಿವಾರಿಸುತ್ತದೆ. ಈ ಎಲ್ಲ ದೃಷ್ಟಿಗಳಿಂದ ಕಾಯಕ - ದಾಸೋಹಗಳು ಶರಣರು ವಿಶ್ವಕ್ಕೆ ನೀಡಿದ ಅಮರ ಕೊಡುಗೆಗಳಾಗಿವೆ.

ಈ ಸಂಚಿಕೆಯಲ್ಲಿ ತಮ್ಮ ವಿಚಾರಗಳನ್ನು, ಆಲೋಚನೆಗಳನ್ನು ಓದುಗರೊಂದಿಗೆ ಹಂಚಿಕೊಂಡಿರುವ ಪ್ರೊ. ಆರ್. ರಾಚಪ್ಪ, ಬಿದರಹಳ್ಳಿ ನರಸಿಂಹಮೂರ್ತಿ, ಡಾ. ಬಿ. ನಂಜುಂಡಸ್ವಾಮಿ, ಚಂದ್ರಶೇಖರ ಕಗ್ಗಲ್ಲುಗೌಡ್ರು, ಪ್ರೊ. ಎಂ. ಪ್ರಸನ್ನಕುಮಾರ್, ಪ್ರೊ.ಎಸ್. ಬಸವರಾಜು, ಡಾ. ವಜ್ರೇಶ್ವರಿ ಎಸ್. ಮೂರ್ತಿ, ಡಾ. ಉಷಾಕಿರಣ್, ಡಾ. ನಾಗವೇಂದ್ರ ಸ್ವಾಮಿ ಚಿದರವಳ್ಳಿ ಅವರ ಲೇಖನಗಳು ಮತ್ತು ಚನ್ನಬಸವಣ್ಣ ಎಸ್. ಅವರ ಕವಿತೆ ಸಂಚಿಕೆಯ ಮೌಲ್ಯವನ್ನು ಹೆಚ್ಚಿಸಿವೆ. ಇವರೆಲ್ಲರಿಗೂ ಮಹಾಮನೆ ಸಂಪಾದಕ ಮಂಡಳಿಯ ಪರವಾಗಿ ಹೃತ್ಪೂರ್ವಕ ಕೃತಜ್ಞತೆಗಳು.

**ಡಾ.ಸಿ.ಯು. ಮಂಜುನಾಥ್**
**ಸಂಪಾದಕರು**

# ಅಧ್ಯಕ್ಷರ ನುಡಿ

ಮುಂಜಾನೆ ಎದ್ದ ಕೂಡಲೇ ಪತ್ರಿಕೆಗಳನ್ನು ನೋಡಿದರೆ ದೌರ್ಜನ್ಯ, ಅತ್ಯಾಚಾರ, ಅಪಘಾತ, ಭ್ರಷ್ಟಾಚಾರಗಳ ಬಗ್ಗೆಯೇ ಸುದ್ದಿಗಳನ್ನು ಕಾಣುತ್ತೇವೆ. ೭೦ ವರ್ಷದ ಮುದುಕ ೫ ವರ್ಷಗಳ ಹೆಣ್ಣುಮಗುವಿನ ಮೇಲೆ ಅತ್ಯಾಚಾರ ಮಾಡಿರುವುದನ್ನು ಓದಿದ್ದೇವೆ. ಮಹಿಳೆ ಪ್ರಿಯಕರನ ಜೊತೆ ಸೇರಿ ಗಂಡನ ಕೊಲೆ ಮಾಡಿರುವುದನ್ನು ಕಾಣುತ್ತೇವೆ. ಚಿಕ್ಕ ಚಿಕ್ಕ ಮಕ್ಕಳನ್ನು ಕಟ್ಟಿಕೊಂಡು ಆತ್ಮಹತ್ಯೆ ಮಾಡಿಕೊಂಡ ಮಹಿಳೆಯ ಕಥೆಯನ್ನು ಓದುತ್ತೇವೆ ಇವೆಲ್ಲವುಗಳನ್ನು ನೋಡಿದಾಗ ನಾವು ಮನುಷ್ಯರೇ? ನಮ್ಮಲ್ಲಿ ಮನುಷ್ಯತ್ವ ಇದೆಯೇ ಎಂಬ ಸಂಶಯ ಬರುತ್ತದೆ; ಪ್ರಶ್ನೆ ಕಾಡುತ್ತದೆ. ಇದಕ್ಕೆ ಮುಖ್ಯ ಕಾರಣ ನಮ್ಮಲ್ಲಿ ಮನುಷ್ಯತ್ವ ಬೆಳೆಯದೇ ಪಶುತ್ವ ಬೆಳೆದಿರುವುದನ್ನು ಕಾಣುತ್ತೇವೆ. ಇದರ ಬುಡವನ್ನು ಕೆದಕಿದಾಗ ನಮಗೆ ತಪ್ಪು ಸಂಸ್ಕಾರ ಸಿಗುತ್ತಿರುವುದು ಗೋಚರವಾಗುತ್ತದೆ.

ನಮಗೆ ಒಳ್ಳೆಯ ಸಂಸ್ಕಾರ ಸಿಗಬೇಕಾದರೆ ಪಾಲಕರು ಮತ್ತು ಶಿಕ್ಷಕರು ಮಕ್ಕಳಿಗೆ ಸರಿಯಾದ ಪರಿಸರವನ್ನು ಒದಗಿಸಬೇಕು; ಮಕ್ಕಳನ್ನು ಸುಸಂಸ್ಕೃತರನ್ನಾಗಿ ಮಾಡಬೇಕು. ಮನೆ, ಮನಸ್ಸು, ಮಾನವ ಮತ್ತು ಮನುಷ್ಯತ್ವದ ಪರಿಕಲ್ಪನೆಗಳು ಪರಸ್ಪರ ಸಹಕಾರಿಯಾಗಿ ಕೆಲಸಮಾಡಬೇಕು. ಮನುಷ್ಯ ಮನೆಯನ್ನು ಕಟ್ಟುತ್ತಾನೆ, ಮನೆ ಮನಸ್ಸನ್ನು ಕಟ್ಟುತ್ತದೆ, ಮನಸ್ಸು ಮನುಷ್ಯತ್ವವನ್ನು ಬೆಳೆಸುತ್ತದೆ. ಮನೆಯ ಪರಿಸರ ಮತ್ತು ಸಂಸ್ಕಾರ ಮನುಷ್ಯನ ಸರ್ವತೋಮುಖ ವ್ಯಕ್ತಿತ್ವವನ್ನು ರೂಪಿಸುತ್ತದೆ.

ವಚನ ಸಾಹಿತ್ಯ ಮಾನವನ ಮನಸ್ಸನ್ನು ಸುಸಂಸ್ಕೃತಗೊಳಿಸಿ, ಮನುಷ್ಯನನ್ನಾಗಿ ಮಾಡುತ್ತದೆ. ಅಲ್ಲಿ ಮನುಷ್ಯತ್ವ ನೆಲೆಗೊಳ್ಳುತ್ತದೆ. ವಚನ ಸಾಹಿತ್ಯದ ಓದಿನಿಂದ ಅಲ್ಲಿಯ ಮಾತುಗಳನ್ನು ಅಳವಡಿಸಿಕೊಂಡರೆ, ಅವನೊಬ್ಬ ಮನುಷ್ಯತ್ವುಳ್ಳ ಸುಸಂಸ್ಕೃತ ಮನುಷ್ಯನಾಗುತ್ತಾನೆ. ವಚನ ಸಾಹಿತ್ಯದಲ್ಲಿ ಅಂಥ ದೊಡ್ಡ ಶಕ್ತಿ ಇದೆ. ಅದನ್ನು ಸರಿಯಾಗಿ ಉಪಯೋಗಿಸಿಕೊಳ್ಳುವ ನಿಟ್ಟಿನಲ್ಲಿ ಸರ್ಕಾರ, ಸಮಾಜ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುವುದು ಮುಖ್ಯವಾಗಿದೆ. ಇದು ಎಲ್ಲರಿಗೂ ಸಂಬಂಧಿಸಿರುವುದರಿಂದ ಇದು ಪಠ್ಯಪುಸ್ತಕಗಳಲ್ಲಿ ಅಳವಡಿಸುವುದು ಅತ್ಯವಶ್ಯವಾಗಿದೆ. ನಮ್ಮ ಯುವಜನಾಂಗ ಇದನ್ನು ಓದುವುದು ಇಂದಿನ ಪರಿಸ್ಥಿತಿಯ ಸುಧಾರಣೆಗೆ ಅನಿವಾರ್ಯವಾಗಿದೆ.

**'ಬನ್ನಿ ಬನ್ನಿರಿ ಹದುಳವಿದ್ದಿರ ಎಂದೊಡೆ ನಿಮ್ಮ ಮೈಸಿರಿ ಹಾರಿಹೋಹುದೇ?**
**ಕುಳ್ಳಿರೆಂದೊಡೆ ನೆಲ ಕುಳಿಹೋಹುದೆ?'** . . . ಎಂಬ ವಚನವಾಗಲೀ,
**'ನುಡಿದರೆ ಮುತ್ತಿನ ಹಾರದಂತಿರಬೇಕು . . .**
**ನುಡಿದರೆ ಲಿಂಗಮೆಚ್ಚಿ ಅಹುದಹುದೆನಬೇಕು'**

ಎಂಬ ವಚನಗಳು ನಮಗೆ ನಡೆ–ನುಡಿಯನ್ನು ಕಲಿಸುತ್ತವೆ. ಅದಕ್ಕಾಗಿಯೇ ವಚನಗಳ ಓದು ಅವಶ್ಯಕ ಎಂದು ಹೇಳಿದ್ದು.

**ಅಪ್ಪಾರಾವ ಅಕ್ಕೋಣೆ**
**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು**



# ಜೇಡರ ದಾಸಿಮಯ್ಯ

**ಪ್ರೊ. ಆರ್. ರಾಚಪ್ಪ**

ಯಾವನೇ ಒಬ್ಬ ಕವಿ – ವಚನಕಾರ– ನಾಟಕಕಾರ ತನ್ನ ಕಾವ್ಯ–ವಚನ–ನಾಟಕಗಳಿಂದ ಭಿನ್ನನಾಗಿರುವುದು ಸಾಧ್ಯವಿಲ್ಲ. 'Style is the man' 'ಶೀಲಷ್ಯೇಯಂ ಶೈಲಿ' ಎಂಬಂತೆ ಆತನ ವ್ಯಕ್ತಿತ್ವದಂತೆ ಅವನ ಕವಿತ್ವವೂ ಇರುತ್ತದೆ, ಇರಬೇಕು. ಆದರೆ ಕೆಲವೊಮ್ಮೆ ಕವಿ ತನ್ನ ಕಾವ್ಯದಲ್ಲಿ ಹೇಳುವ ಆದರ್ಶಕ್ಕೂ ತನ್ನ ಜೀವನಾದರ್ಶನಕ್ಕೂ ವ್ಯತ್ಯಾಸ್ತವಾಗಿರುವುದೂ ಉಂಟು. ವ್ಯಕ್ತಿಯಾಗಿ ಕವಿ ತನ್ನ ಕಾವ್ಯದಿಂದ ಭಿನ್ನನಾಗಿರುವುದೂ ಉಂಟು. ಅಲ್ಲದೆ ತನ್ನ ಕಾವ್ಯ–ನಾಟಕ–ಕವಿತೆಯ ಬಗೆಗೆ ಆತನಿಗೆ ಅಭಿಮಾನ ಇರುವುದೂ ಉಂಟು. ಕವಿಯಾಗಿ–ನಾಟಕಕಾರನಾಗಿ–ಸಾಹಿತಿಯಾಗಿ ತನ್ನನ್ನು ಎಲ್ಲರೂ ಗೌರವಿಸಬೇಕೆಂದು ಬಯಸುವುದು ಸಹಜ. ಏಕೆಂದರೆ ಕವಿಯೂ ಒಬ್ಬ ಮನುಷ್ಯನೇ ಆಗಿರುತ್ತಾನೆ. ಆದುದರಿಂದ ಆತನ ವ್ಯಕ್ತಿತ್ವ ಹಾಗೂ ಅಭಿವ್ಯಕ್ತಿಗಳ ನಡುವೆ ಅಂತರವಿರುವುದು ಸಹಜ. ಆದ್ಯ ವಚನಕಾರನೆಂದು ಪ್ರಸಿದ್ಧನಿರುವ ಜೇಡರ ದಾಸಿಮಯ್ಯನೂ ವ್ಯಕ್ತಿಯಾಗಿ ನಿಷ್ಠುರನಾಗಿರುವುದು ಆತನ ವಚನಗಳ ಅಧ್ಯಯನದಿಂದ ತಿಳಿದುಬರುತ್ತದೆ. ಜೀವನ ಮೌಲ್ಯಗಳನ್ನು ಅತ್ಯಂತ ಗೌರವದಿಂದ ಕಂಡಂತಹ ದಾಸಿಮಯ್ಯ ಅವುಗಳನ್ನು ತನ್ನ ವಚನಗಳಲ್ಲಿ ಅಭಿವ್ಯಕ್ತಿಸುವಾಗ ತುಂಬಾ ಕಠಿಣನಾಗಿರುವುದುಂಟು.

ದಾಸಿಮಯ್ಯನ ತಂದೆ–ತಾಯಿ, ಗುರು ಇತ್ಯಾದಿಗಳ ಬಗೆಗೆ ಹೆಚ್ಚಿನ ಮಾಹಿತಿಗಳು ದೊರೆಯುವುದಿಲ್ಲ. ಆತ ಮುದೆನೂರಿನವನು, ಮುದೆನೂರಿನ ರಾಮನಾಥ ಆತನ ಆರಾಧ್ಯ ದೈವ ಎಂಬುದು ತಿಳಿದು ಬರುವ ಸಂಗತಿಗಳು. ಆತನ ಹೆಂಡತಿ ದುಗ್ಗಳೆ ಎಂದು ತಿಳಿದುಬರುತ್ತದೆ. ಆತ ದುಗ್ಗಳೆಯನ್ನು ಪತ್ನಿಯಾಗಿ ಪಡೆದದ್ದು ಒಂದು ವಿಚಿತ್ರ ಸಂದರ್ಭವಾಗಿ ನಿರೂಪಿಸಲ್ಪಟ್ಟಿದೆ. ಕನ್ಯಾರ್ಥಿಯಾಗಿ ಹೊರಟ ದಾಸಿಮಯ್ಯ "ಹಸ್ತದಲ್ಲಿ ಮಳಲೊಂದು ಗಂಟು, ಅಕ್ಕಿಯನೊಂದರುವೆಯಲ್ಲಿ ಗಂಟು ಕಟ್ಟಿಕೊಂಡು, ಕಬ್ಬಿನ ಕೋಲ ಹಸ್ತದಲ್ಲಿ ಪಿಡಿದುಕೊಂಡು ಕಟ್ಟಿಗೆಯ ಮುಟ್ಟದೆ, ಕಿಚ್ಚನೊಟ್ಟಿ, ನೀರಮುಟ್ಟದೆ ಮಳಲಕ್ಕಿಯಂ ಪಾಯಸವ ಮಾಡುವಲ್ಲಿ – ಕರಿಯ ಕಬ್ಬಿನ ಕೋಲ ಒಲೆಯೊಳಗಿಕ್ಕಿ ಬೆಂಕಿಯನುರುಹಿ ಮಳಲಕ್ಕಿಯಂ ಕೂಡಿ ಪಾಯಸಮಂ ಮಾಡಿ ನೀಡಿದಡೆ ಅಂತಪ್ಪ ಸ್ತ್ರೀಯಂ ಮದುವೆಯಾಗುವೆನೆಂದು ದೇಶಾಂತರದಲ್ಲಿ ಮನೆ ಮನೆಯಲ್ಲಿ ಭಿಕ್ಷವಂ ಬೇಡುತ್ತ ಕೇಳುತ್ತ" ಬರುತ್ತಿರುತ್ತಾನೆ.

ಈ ಮುಡಿಗೆಯನ್ನು ಎತ್ತಿದ ಕನ್ಯೆ ದುಗ್ಗಳೆ. ಆಕೆ ಮತ್ತೊಂದು ತೆಕ್ಕೆಯಷ್ಟು ಕಬ್ಬನ್ನು ತರಿಸಿದಳು. ಕಬ್ಬಿನಿಂದ ಹಾಲು ಹಿಂಡಿಕೊಂಡು ಆ ಕೋಲುಗಳ ಸಿಪ್ಪೆ ಮತ್ತು ಬೆಂಡನ್ನು ಒಣಗಿಸಿದಳು. ಆ ಚರಟವನ್ನು ಸೌದೆಯಾಗಿಸಿಕೊಂಡಳು. ಕಬ್ಬಿನ ರಸ ನೀರು, ಬೆಲ್ಲ ಆಯಿತು. ಒಂದು ಮಡಕೆಯಲ್ಲಿ ಮರಳು ಬೆರಸಿದ ಅಕ್ಕಿಯನ್ನು ಸುರಿದು ಅದಕ್ಕೆ ಕಬ್ಬಿನ ರಸವನ್ನು ಹಾಕಿ ಒಲೆಯ ಮೇಲಿಟ್ಟು ಬೇಯಿಸಿದಳು. ಅಟ್ಟ ಪಾಯಸವನ್ನು ಮತ್ತೊಂದು ಮಡಕೆಗೆ ಬಸಿದಳು. ಮರಳು ಅಟ್ಟಮಡಕೆಯಲ್ಲಿ ಉಳಿಯಿತು. ಪಾಯಸವನ್ನು ದಾಸಿಮಯ್ಯನಿಗೆ ಬಡಿಸಿ ವಿಚಿತ್ರ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದಳು "ಅಗ್ಗಳೆಯ ದುಗ್ಗಳೆ".

ಹೀಗೆ ಜೀವನದಲ್ಲಿ ಅತಿ ನಿಷ್ಠುರನಾಗಿ ದಾಸಿಮಯ್ಯ ಕಂಡು ಬರುವನು. ಅವನ

ವಚನಗಳು ಹೇಗೆ ಸಂಕ್ಷಿಪ್ತವೋ ಹಾಗೆಯೇ ಜೀವನ ಸಮಸ್ಯೆಗಳಿಗೆ ಆತನು ಕೊಡುವ ಉತ್ತರವೂ ಸಂಕ್ಷಿಪ್ತ.

ಒಮ್ಮೆ ಜಂಗಮರಿಬ್ಬರಲ್ಲಿ ಸಂಸಾರ ಹೆಚ್ಚೋ ಸನ್ಯಾಸ ಹೆಚ್ಚೋ? ಎಂಬ ಜಿಜ್ಞಾಸೆ ಮೂಡಿತು. ಅವರು ಪರಿಹಾರಕ್ಕೆ ದಾಸಿಮಯ್ಯನ ಬಳಿಗೆ ಬಂದರು. ದಾಸಿಮಯ್ಯ ಅವರ ಸಮಸ್ಯೆಯನ್ನು ಕೇಳಿ ಮುಗುಳ್ನಕ್ಕು ಅವರಿಬ್ಬರನ್ನೂ ನಡು ಹಗಲಿನಲ್ಲಿ ಮಗ್ಗದ ಹತ್ತಿರ ಕುಳ್ಳಿರಿಸಿ ದುಗ್ಗಳೆಯನ್ನು ಕರೆದು 'ದಾರ ಹರಿದಿದೆ ದೀಪ ತಾ' ಎಂದನು. ಉಸಿರೆತ್ತದೆ ದೀಪಾ ತಂದಿಟ್ಟಳು ಆ ಸಾಧ್ವಿ.

ತಲೆಯ ಬಳಿ ಕುಂಚಿಗೆ ಇದ್ದರೂ, 'ಕುಂಚಿಗೆಕೊಡು' ಎನ್ನಲು ಬಿರಬಿರನೆ ಬಂದು ಕುಂಚಿಗೆ ತೆಗೆದಿತ್ತಳು. ಮತ್ತೆ ಊಟಕ್ಕೆ ಕುಳಿತ ದಾಸಿಮಯ್ಯ "ಮೊನ್ನೆ ಮಾಡಿದ ಅಂಬಲಿ ಸುಡುತ್ತಿದೆ" ಎನ್ನಲು ಆಕೆ ಗಾಳಿ ಬೀಸಿ ಅಂಬಲಿ ಆರಿಸಿದಳು. ಆಶ್ಚರ್ಯ ಭರಿತರಾಗಿ ಈ ವಿಚಿತ್ರ ವರ್ಣನೆಯನ್ನು ನೋಡುತ್ತಿದ್ದ ಜಂಗಮರನ್ನು ಕುರಿತು "ಇಂತಹ ಹೆಣ್ಣು ಸಿಕ್ಕರೆ ಸಂಸಾರವೇ ಲೇಸು; ಎದುರುತ್ತರ ಕೊಡುವ ಹೆಣ್ಣು ಸಿಕ್ಕರೆ ಸನ್ಯಾಸವೇ ಲೇಸು" ಎಂದು ಹೇಳಿದನಂತೆ. ಹೀಗೆ ದಾಸಿಮಯ್ಯ ಬಹುಕಠಿಣ ವ್ಯಕ್ತಿಯಾಗಿ, ಕಾಯಕ ಜೀವಿಯಾಗಿ, ನಿಷ್ಠಾವಂತ ಭಕ್ತನಾಗಿ ನಮಗೆ ಕಂಡುಬರುತ್ತಾನೆ.

ವಚನ ಸಾಹಿತ್ಯದ ಉಗಮವನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲವಾದರೂ ಸದ್ಯಕ್ಕೆ ಜೇಡರದಾಸಿಮಯ್ಯನೇ ಮೊದಲ ವಚನಕಾರನೆಂದು ಹೇಳುವುದು ಅನಿವಾರ್ಯ. 'ಶರಣರ ಸೂಳ್ನುಡಿ'; 'ಮೃಡಭಕ್ತರ ನುಡಿಗಡಣ' ಎಂಬ ಮಾತುಗಳಲ್ಲಿ ತನಗಿಂತಲೂ ಹಿಂದೆ ವಚನಗಳಿದ್ದುವೆಂದು ದಾಸಿಮಯ್ಯನೇ ಸೂಚಿಸಿದ್ದಾನೆ. ಆದರೆ ತನಗಿಂತಲೂ ಹಿಂದೆ ಇದ್ದ ವಚನಕಾರರು ಯಾರು ಎಂಬುದನ್ನು ಸ್ಪಷ್ಟವಾಗಿ ತಿಳಿಸಿಲ್ಲ.

ದಾಸಿಮಯ್ಯ ಕ್ರಿ.ಶ. ಸು.೧೦೬೦ರಲ್ಲಿ ಜನ್ಮ ತಳೆದು ಕ್ರಿ.ಶ. ಸು.೧೧೫೦ರವರೆಗೆ ಜೀವಿಸಿದ್ದಿರಬಹುದೆಂದು ಸದ್ಯಕ್ಕೆ ಹೇಳಬಹುದು. ಈತನವು ಈಗ ೧೭೫ ವಚನಗಳು ಉಪಲಬ್ಧವಿದೆ.

ದಾಸಿಮಯ್ಯನ ಜೀವಿತ ಕಾಲ ವೀರಶೈವದ ಪರಿಷ್ಕರಣದ ಪರ್ವಕಾಲ. ದಾಸಿಮಯ್ಯನ ಜೀವನದಲ್ಲಿ ನಡೆದಿರಬಹುದಾದ ಘಟನೆಗಳನ್ನು ಗಮನಿಸಿದಾಗ ಅವನ ವಚನಗಳನ್ನು ಓದಿದಾಗ ಅವನು ವೀರಶೈವನಾಗಿದ್ದನೆಂಬುದು ಸ್ಪಷ್ಟ. ವೀರಶೈವ ಧರ್ಮಾಚರಣೆಯನ್ನು ತನ್ನ ವಚನಗಳಲ್ಲಿ ನಿರೂಪಿಸಿರುವ ದಾಸಿಮಯ್ಯ ನೇರವಾಗಿ ಜನಭಾಷೆಯನ್ನೇ ತನ್ನ ಅಭಿವ್ಯಕ್ತಿ ಮಾಧ್ಯಮವಾಗಿ ಬಳಸಿಕೊಂಡಿದ್ದಾನೆ. ನೇರ ನಿರೂಪಣೆ, ನಿಷ್ಠುರ, ಸ್ಪಷ್ಟ ಹೇಳಿಕೆಗಳು, ನಿಖರವಾದ ನಿಲುವು ಅವನ ವಚನಗಳಲ್ಲಿ ಕಂಡುಬರುತ್ತವೆ.

ದಾಸಿಮಯ್ಯನ ವಚನಗಳನ್ನು ವಿಶ್ಲೇಷಿಸಿದಾಗ ಆತನಿಗೆ ಇದ್ದಂತಹ ಸಾಮಾಜಿಕ ಕಳಕಳಿ, ಜೀವನ ಮೌಲ್ಯಗಳ ಬಗ್ಗೆ ಇದ್ದ ಕಾಳಜಿ ವ್ಯಕ್ತವಾಗುತ್ತದೆ. ಪರಿವರ್ತನೆಯ ಪರ್ವಕಾಲದಲ್ಲಿ ಇದ್ದ ದಾಸಿಮಯ್ಯ ತನ್ನ ಅನುಭವಗಳನ್ನು ವಚನಗಳಲ್ಲಿ ನಿರೂಪಿಸಿದ್ದಾನೆ.

ಜೇಡರ ದಾಸಿಮಯ್ಯನ ವಚನಗಳ ಮೌಲ್ಯವನ್ನು ಆಧ್ಯಾತ್ಮಿಕ ಮತ್ತು ಸಾಹಿತ್ಯಕ ಎಂದು ಎರಡು ದೃಷ್ಟಿಗಳಿಂದ ವಿಚಾರಮಾಡಬಹುದು.

ಚಿಕ್ಕ ಚಿಕ್ಕ ವಾಕ್ಯಗಳಿಂದ ಕೂಡಿದ ಈತನ ವಚನಗಳಲ್ಲಿ ಪರಿಪಕ್ವ ಅನುಭವವನ್ನೂ, ಅತೀಂದ್ರಿಯವಾದ ಅನುಭಾವವನ್ನೂ ಕಾಣಬಹುದು. ಪರಮಾತ್ಮ ಸ್ವರೂಪ, ಸೃಷ್ಟಿಯ ಕ್ರಮ,



ಜೀವಾತ್ಮ ಪರಮಾತ್ಮರಿಗೆ ಇರುವ ಸಮ್ಯಕ್ ಸಂಬಂಧ, ಗುರುವಿನ ಲಕ್ಷಣ, ಭಕ್ತಾಭಿಮಾನ, ಸಮರ್ಪಣಭಾವ, ನೀತಿ, ಧರ್ಮ ಮೊದಲಾದ ವಿಚಾರಗಳನ್ನು ಅತ್ಯಂತ ಸಮರ್ಥವಾಗಿ ಈತನ ವಚನಗಳು ನಿರೂಪಿಸುತ್ತವೆ.

"ಇಂತೆಂದ ಭೂಮಿಯ, ಇಂತೆಂದ ಗಗನವ, ಇಂತೆಂದ ಸಪ್ತ ಸಾಗರವ" ಎಂಬ ಮಾತುಗಳಲ್ಲಿ ಸೃಷ್ಟಿಯ ಕ್ರಮವನ್ನು ಕುರಿತು ಹೇಳುವಾಗಿನ ಮಾತಿನ ಚಮತ್ಕೃತಿ ವ್ಯಕ್ತವಾಗುತ್ತದೆ. ಸರ್ವಶಕ್ತನಾದ ಪರಮಾತ್ಮನಿಗೆ ಈ ಸೃಷ್ಟಿ ಬಹು ಸುಲಭ. ಐಂದ್ರಜಾಲಿಕ ವಸ್ತುಗಳನ್ನು ನಿರ್ಮಿಸುವಂತೆ ಭೂಮಿ, ಗಗನ, ಸಪ್ತಸಾಗರಗಳನ್ನು ಸೃಷ್ಟಿಮಾಡಿದ ಮಹಾ ಐಂದ್ರಜಾಲಿಕ ಪರಮಾತ್ಮ ಎಂದು ಗುರುತಿಸುವ ವಿಧಾನ ಸೊಗಸಾಗಿದೆ. ಪರಮಾತ್ಮಶಕ್ತಿಯ ಅನಂತತೆಯನ್ನು –

**"ಶರಧಿಯ ಮೇಲೆ ಧರೆಯ ಕರಗದಂತಿರಿಸಿದೆ**
**ಅಂಬರಕ್ಕೆ ಗಡಿಗೆ ಬೋದಿಗೆ ಇಲ್ಲದಂತಿರಿಸಿದೆ",**

ಎಂಬ ಮಾತುಗಳಲ್ಲಿ ಹೇಳಿ ಪರಮಾತ್ಮನ ಇರವನ್ನು "ಮಣಿಗಣ ಸೂತ್ರದಂತೆ ತ್ರಿಣಯನ ನೀನಿಪ್ಪೆಯಯ್ಯಾ" ಎಂದು ಅರ್ಥಪೂರ್ಣವಾಗಿ ಹೇಳಿದ್ದಾನೆ. ಒಂದೊಂದು ಮಣಿಯೂ ಭಿನ್ನವಾಗಿರುವಂತೆ ಆತ್ಮಗಳು ಭಿನ್ನ. ಆದರೆ ಆ ಮಣಿಗಳನ್ನು ಸೇರಿಸುವ ಸೂತ್ರ ಒಂದೇ ಆಗಿರುವಂತೆ, ಎಲ್ಲ ಆತ್ಮಗಳನ್ನು ಬಂಧಿಸಿಡುವ ಪರಮಾತ್ಮ ಒಬ್ಬನೇ ಎಂದು ಸ್ಪಷ್ಟಗೊಳಿಸಿದ್ದಾನೆ. ಇಲ್ಲಿಯ ಭಾವ ನೇರವಾಗಿ ಆತ್ಮಕ್ಕೆ ತಟ್ಟುವಂತಹುದು.

ಸರ್ವಶಕ್ತನಾದ ಪರಮಾತ್ಮ ಸೃಷ್ಟಿಗೆ ಹೇಗೆ ಕಾರಣಕರ್ತನೋ ಅದರ ಸ್ಥಿತಿಗೂ ಅವನೇ ಕಾರಣವೆಂಬಂಶವನ್ನು –

**"ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ,**
**ಸುಳಿದು ಬೀಸುವ ಗಾಳಿ ನಿಮ್ಮ ದಾನ"**
**"ಎತ್ತು ನಿಮ್ಮ ದಾನ, ಬಿತ್ತು ನಿಮ್ಮ ದಾನ,**
**ಸುತ್ತಿ ಹರಿವ ಸಾಗರ ನಿಮ್ಮ ದಾನ"**

ಎಂಬ ಮಾತುಗಳಲ್ಲಿ ಹೇಳಿದ್ದಾನೆ. ಇಲ್ಲಿನ ವಾಕ್ಯರಚನಾಕೌಶಲ, ವಿಷಯನಿರೂಪಣಾ ವಿಧಾನ ನವೋನವ್ಯ.

ಭಕ್ತಿಯ ಆಚರಣೆಯ ಬಗೆಗೆ ಅತ್ಯಂತ ಮೌಲಿಕ ಭಾವನೆಗಳನ್ನು ಹೊಂದಿದ್ದ ದಾಸಿಮಯ್ಯ ಎಂಬುದು ಅವನ ವಚನಗಳಿಂದ ಸ್ಪಷ್ಟವಾಗುತ್ತದೆ. ಭಕ್ತಿ ಶುದ್ಧ ಮನಸ್ಸಿನಿಂದ ಕೂಡಿರಬೇಕು. ಅವರಿವರಿಗಾಗಿ, ಊರಿಗಾಗಿ, ತೋರಿಕೆಗಾಗಿ ಭಕ್ತಿಯನ್ನು ಆಚರಿಸಬಾರದು, ಅದು 'ದೂರದ ಹೊಲದಂತೆ'. ಅದರಿಂದ ಯಾವ ಲಾಭವೂ ಇಲ್ಲ, 'ದೂರದ ಹೊಲದಂತೆ' ಎಂಬ ಸಾಮ್ಯ ಗಮನಾರ್ಹವಾದುದು. ಹೀನಮನದಿಂದ ಮಾಡುವ ಭಕ್ತಿಯನ್ನು ಕುರಿತು ಹೇಳುವಾಗ – 'ಹಂದಿ ಶ್ರೀ ಗಂಧವ ಹೂಸಿದರೇನು ಗಂಧರಾಜನಾಗಬಲ್ಲುದೆ?' 'ನವಿಲು ನಲಿಯಿತ್ತೆಂದು ಕಾಕೋಳಿ ಪುಚ್ಛವ ತರಕೊಂಡಂತೆ ಕರ್ಮಿಗಳ ಭಕ್ತಿ'. 'ವೇಷವನ್ನೂ ವೇಶಿಯನೂ ಸರಿಯೆಂಬೆ' ಎಂಬ ಮಾತುಗಳಲ್ಲಿ ಖಂಡಿಸಿದ್ದಾನೆ.

ತಾತ್ವಿಕ ವಿಚಾರಗಳನ್ನು ಸಮರ್ಥವಾಗಿ ನಿರೂಪಿಸುವ ಈತನ ವಚನಗಳಲ್ಲಿನ ಕಾವ್ಯ ಸೌಂದರ್ಯವೂ ಅಷ್ಟೇ ಸಮರ್ಥವಾದುದು. ಕನ್ನಡ ಸಾಹಿತ್ಯದಲ್ಲಿ ಜನ ಭಾಷೆಗೆ ಕಾವ್ಯಪಟ್ಟ ಕಟ್ಟಿ ಸಾಮಾನ್ಯ ಜನತೆಯೂ ಕಾವ್ಯಗಂಗೆಯಲ್ಲಿ ಮುಳುಗಿ ಪುನೀತವಾಗುವಂತೆ ಮಾಡಿದ

ಕೀರ್ತಿ ದಾಸಿಮಯ್ಯನದು. ಸಾಂಪ್ರದಾಯಿಕವಾಗಿ ಕಾವ್ಯರಚನೆ ಮಾಡಿದ ಕವಿಗಳು ಭಾಷೆಗೆ ಉತ್ತಮ ಸ್ಥಾನ ತಂದಿತ್ತರು. ಜನಭಾಷೆಯನ್ನು ಗ್ರಾಂಥಿಕ ಭಾಷೆಯಾಗಿ ಪರಿವರ್ತಿಸಿ, ಜನ ನುಡಿಯಲ್ಲಿ ವಿಷಯ ನಿರೂಪಿಸಿ ಕನ್ನಡ ಭಾಷೆಗೆ ಉತ್ತಮೋತ್ತಮ ಸ್ಥಾನ ತಂದಿತ್ತ ಕೀರ್ತಿ ಈತನದು.

ಈತ ಹೇಳುವ ಮಾತುಗಳು ರಸವತ್ತಾದ ಕಾವ್ಯವಾಣಿಗಳಾಗಿವೆ. ಉಪಮೆ, ದೃಷ್ಟಾಂತ, ಗಾದೆ ಮಾತುಗಳು ಆಡುನುಡಿಯ ಪದ ಸಮೂಹಗಳ ಬಳಕೆಯಿಂದ ಅವನ ಅಭಿವ್ಯಕ್ತಿಯಲ್ಲಿ ವಿಶೇಷ ಕಾಂತಿ ಮೂಡಿಬಂದಿದೆ. ಚಿಕ್ಕ ವಾಕ್ಯದಲ್ಲಿ ವಿಪುಲವಾದ ಬದುಕಿನ ಚಿತ್ರವನ್ನು ಕೊಡುವಲ್ಲಿ ಈತ ಸಮರ್ಥ. ಈತನ ಭಾಷೆ ಜೇನಿನಲ್ಲಿ ಅದ್ದಿ ತೆಗೆದ ರಸಬಾಳೆಯ ಹಣ್ಣಿನಂತೆ ಬಲುರುಚಿ ಬಲುಹಿತ.

ದಾಸಿಮಯ್ಯ ಬಳಸಿರುವ ಉಪಮೆಗಳು ಹೆಚ್ಚು ಜನಜೀವನದಿಂದ ಆರಿಸಿಕೊಂಡಂತಹವುಗಳು.

**"ಉರಿವ ಕೆಂಡದ ಮೇಲೆ ತೃಣವ ತಂದಿರಿಸಿದಂತೆ**
**ಆ ತೃಣವನು ಆ ಕೆಂಡ ನುಂಗುವಂತೆ"**

ಎಂಬಲ್ಲಿ ಬರುವ ಕೆಂಡ, – ತೃಣ; ಗುರುಚರಣ–ದೇಹಗಳ ನಡುವಣ ಉಪಮೆ ಮನೋಜ್ಞ.

**"ಘಟದೊಳಗೆ ತೋಱುವ ಸೂರ್ಯನಂತೆ"**
**"ಮಠದೊಳಗಣ ಬೆಕ್ಕು ಇಲಿಯ ಕಂಡು ಪುಟನೆಗೆದಂತೆ"**
**"ಹೊಳ್ಳ ಕುಟ್ಟಿ ಕೈ ಹೋಟಿಯಾದಂತೆ"**
**"ಪಾಶಕ್ಕೆ ಸಿಕ್ಕಿದ ಪಶುವಿನಂತೆ"** –

ಎಂಬಲ್ಲಿ ಉಪಮಾ ಚಾತುರ್ಯವನ್ನು ಗಮನಿಸಿ ಘಟವನ್ನು ದೇಹಕ್ಕೂ ಪರಮಾತ್ಮನನು ಸೂರ್ಯನಿಗೂ ಬಱುಸಟೆಗನನ್ನು ಬೆಕ್ಕಿಗೂ, ಇಲಿಯನ್ನು ಸಂಸಾರಕ್ಕೂ, ಜೀವಿಯನ್ನು ಪಶುವಿಗೂ, ಪಾಶವನ್ನು ಸಂಸಾರಕ್ಕೂ ಹೋಲಿಸಿರುವ ಉಪಮೆಗಳ ಸೊಗಸೇ ಸೊಗಸು.

ಜನತೆಯ ನಿತ್ಯಬಳಕೆಯಲ್ಲಿನ ಭಾಷೆಯಿಂದ ಬಂದಂತಹ ದೃಷ್ಟಾಂತಗಳನ್ನು ದಾಸಿಮಯ್ಯ ನಿಪುಣತೆಯಿಂದ ಬಳಸಿದ್ದಾನೆ.

**"ಕಡೆಗೀಲಿಲ್ಲದ ಬಂಡಿ ಹೊಡೆಗೆಡೆಯದೆ ಮಾಣ್ಬುದೆ**
**ಕಡೆಗೀಲು ಬಂಡಿಗಾಧಾರ, ಇಡಿದರ್ಪಯೇರಿದ್ದ**
**ಒಡಲೆಂಬ ಬಂಡಿಗೆ ಮೃಡ ಭಕ್ತರ ನುಡಿಗಡಣವೇ**
**ಕಡೆಗೀಲು ಕಾಣಾ ರಾಮನಾಥ"**

ಎಂಬಲ್ಲಿ ಬಂಡಿಯ ದೃಷ್ಟಾಂತ ಜೀವಂತವಾಗಿ ಮೂಡಿಬಂದಿದೆ. ಒಡಲು–ಬಂಡಿ; ಇವೆರಡೂ ಚಲನಕ್ರಿಯೆಯಿಂದ ಕೂಡಿದವುಗಳು. ಇವೆರಡರ ಚಕ್ರಗಳು ಸುಸೂತ್ರವಾಗಿ ಉರುಳಲು ಕಡೆಗೀಲು ಅವಶ್ಯಕ. ಬಂಡಿಯ ಚಕ್ರಕ್ಕೆ ಕಬ್ಬಿಣದ ಕಡೆಗೀಲಾದರೆ, ದರ್ಪದಿಂದ ಕೂಡಿದ ದೇಹ ಚಕ್ರಕ್ಕೆ ಮೃಡ ಭಕ್ತರ ನುಡಿಗಡಣ ಕಡೆಗೀಲು. ಎಷ್ಟು ಉಚಿತವಾದ ಸೊಗಸಾದ ದೃಷ್ಟಾಂತ.

ನರಕದಲ್ಲಿ ಬೀಳುವ ಮನುಷ್ಯನಿಗೆ ಶಿವಭಕ್ತಿ ಹಿಡಿಸದು ಎಂಬುದನು 'ಜ್ವರಬಡಿದ ಬಾಯಿಗೆ ನೊರೆವಾಲು ಒಱಿಸುವುದೆ', ಎಂಬ ದೃಷ್ಟಾಂತದಿಂದ ಸ್ಪಷ್ಟಗೊಳಿಸಿದ್ದಾನೆ. ಸಂಸಾರ



ವ್ಯಾಮೋಹದಿಂದ ಕೂಡಿದ ಮನುಷ್ಯ ಜ್ವರಪೀಡಿತನಾದಂತೆ. ಜ್ವರಪೀಡಿತನ ಬಾಯಿಗೆ ಯಾವುದೂ ರುಚಿಸುವುದಿಲ್ಲ. ಹಾಗೆಯೇ ಸತ್ವಪೂರ್ಣವಾದ ನೊರೆಹಾಲೂ ಕೂಡ. ಲೌಕಿಕದ ಆಶೆ ಆಮಿಷಗಳ ಸುಳಿಯಲ್ಲಿ ಸಿಕ್ಕಿದ ಮನುಷ್ಯನಿಗೆ ನೊರೆ ಹಾಲಿನಂತಹ ಶಿವಭಕ್ತಿ ರುಚಿಸುವುದಿಲ್ಲ.

"ಕೆನೆಯಿಲ್ಲದ ಮೊಸರ ಕಡೆದರೆ ಅಲ್ಲಿ ಹನಿ ತುಪ್ಪವಿಲ್ಲ" ಎಂಬ ದೃಷ್ಟಾಂತದಿಂದ ದೇಹ ಮನಗಳನ್ನು ಒಮ್ಮತದಲ್ಲಿಡಬೇಕು. ದೇಹವನ್ನು ಅಧೀನದಲ್ಲಿಟ್ಟುಕೊಂಡಂತೆ ಮನವನ್ನೂ ಅಧೀನದಲ್ಲಿಟ್ಟುಕೊಳ್ಳಬೇಕೆಂದು ತಿಳಿಹೇಳುವನು. ಹದವಾದ ಮನಸ್ಸು, ಪರಿಪಕ್ವವಾದ ಮನಸ್ಸು, ಭಗವದ್ಭಕ್ತಿಯನ್ನು ಆಚರಿಸಬೇಕು. ಆಗ ಅಲ್ಲಿ ನವನೀತದಂತಹ ಭಕ್ತಿ ಮೂರ್ತಗೊಳಿಸುವುದು ಎಂದು ತಿಳಿಸಿದ್ದಾನೆ.

ದೈವನಿಷ್ಠೆಯಿಲ್ಲದ ಜನ ಹೆಣ್ಣು–ಹೊನ್ನು–ಮಣ್ಣುಗಳ ಆಮಿಷದಲ್ಲಿ ಸಿಕ್ಕು ನಿಜಭಕ್ತಿಯನ್ನು ಆಚರಿಸಲಾರರು ಎಂಬುದನ್ನು "ಹಂಬೇಡಿಗೆ ಹಿಡಿಯಬಹುದೆ ಹೇಳಿಗೆಯೊಳಗಣ ಹಾವ" ಎಂಬ ದೃಷ್ಟಾಂತದಿಂದಲೂ, ಧನಮನದಿಂದ ಮಾಡುವ ಭಕ್ತಿ "ಸುನಕನ ಬಾಯ ಎಲುವ ಪ್ರತಿಸುನಕ ತಿಂದಂತೆ", ಎಂಬ ದೃಷ್ಟಾಂತದಿಂದ ಸ್ಪಷ್ಟಗೊಳಿಸುವನು. ಈ ಎಲ್ಲಾ ದೃಷ್ಟಾಂತಗಳಲ್ಲಿ ಆಡುಮಾತಿನ ಸೊಗಡು ಇರುವುದು ಸ್ಪಷ್ಟ.

**"ನವಿಲು ಕುಣಿಯಿತ್ತೆಂದರೆ ಕಾಕೋಳಿ ಪುಚ್ಛವ ತರಕೊಂಡಂತೆ"**
**"ಕತ್ತೆ ಬಲ್ಲುದೆ ಕತ್ತುರಿಯ ವಾಸನೆಯ"**
**"ಬತ್ತಿದ ಕೆರೆಯಲ್ಲಿ ತಾವರೆಯ ಬಿತ್ತಿದಂತೆ"**
**"ಹುಣಿಸೆಯ ಹೂವೆಲ್ಲಾ ಕಾಯಾಗಬಲ್ಲುದೆ"**?

ಇತ್ಯಾದಿ ನಿತ್ಯಬಳಕೆಯಲ್ಲಿದ್ದ ಗಾದೆಮಾತುಗಳನ್ನು ಸಂದರ್ಭಕ್ಕೆ ಹೊಂದುವಂತೆ ಸಮರ್ಥವಾಗಿ ಬಳಸಿದ್ದಾನೆ.

ಒಂದು ಮಾತನ್ನು ಹಲವು ಅರ್ಥಗಳಲ್ಲಿ – ಶ್ಲೇಷಾರ್ಥದಲ್ಲಿ ಸಮುಚಿತವಾಗಿ ಸಮರ್ಥವಾಗಿ ಬಳಸುವ ನೈಪುಣ್ಯ ದಾಸಿಮಯ್ಯನದು. 'ಮಣಿವೊಡೆ ಶಿವಭಕ್ತ ಮಣಿಯ ಕಟ್ಟಲೇಬೇಕು' ಎಂಬಲ್ಲಿ 'ಮಣಿ' ಶಬ್ದವನ್ನು ತಲೆಬಾಗು, ರುದ್ರಾಕ್ಷಿ, ರತ್ನ, ಸೇವೆ ಎಂಬೆಲ್ಲ ಅರ್ಥದಲ್ಲಿ ಬಳಸಿದ್ದಾನೆ. "ಘಟದೊಳಗೆ ತೋಱುವ ಸೂರ್ಯನಂತೆ', ಎಂಬಲ್ಲಿ 'ಘಟ' ಶಬ್ದ ಮಡಕೆ–ಜೀವ ಎಂಬೆಲ್ಲ ಅರ್ಥಗಳಲ್ಲಿ ಪ್ರಯೋಗವಾಗಿದೆ. 'ಬಯಲ ಬಣ್ಣವ ಮಾಡಿ' ಎಂಬಲ್ಲಿ 'ಬಯಲು' ಶಬ್ದ 'ಪರಿಪೂರ್ಣ', ಶೂನ್ಯ (ಏನೂ ಇಲ್ಲದಿರುವಿಕೆ) ಎಂಬರ್ಥದಲ್ಲಿಯೂ 'ಬಣ್ಣ'– ಸೃಷ್ಟಿ ಎಂಬ ವಿಶಿಷ್ಟ ಅರ್ಥ ಹಾಗೂ ಬಣ್ಣ (ವರ್ಣ) ಎಂಬ ಸಾಮಾನ್ಯ ಅರ್ಥದಲ್ಲಿಯೂ ಪ್ರಯೋಗವಾಗಿದೆ.

ದಾಸಿಮಯ್ಯ ಪ್ರಾಸಪ್ರಿಯನಲ್ಲದಿದ್ದರೂ, ಪ್ರಾಸಾನುಪ್ರಾಸಗಳು ಆತನ ವಚನಗಳಲ್ಲಿ ತಾವಾಗಿಯೇ ಮೂಡಿ ಅರ್ಥಪುಷ್ಟಿಯನ್ನೂ, ಭಾವತೀವ್ರತೆಯನ್ನೂ ಹೆಚ್ಚಿಸುತ್ತವೆ. 'ಮಣಿ ಗಣಸೂತ್ರದಂತೆ ತ್ರಿಣಯನ ನೀನಿಪ್ಪೆ' ಎಂಬಲ್ಲಿ 'ಣ'–'ನ' ಕಾರಗಳು ಅನುಪ್ರಾಸವಾಗಿ ಮೂಡಿ ಬಂದು ಅರ್ಥವಂತಿಕೆಯನ್ನು ಹೆಚ್ಚಿಸಿವೆ. "ನೆಱೆ ನಂಬಿ ಕರೆದರೆ ನರಿಕುದುರೆಯಾಗಿ ಹರಿಯುವೆ" ಎಂಬಲ್ಲಿ 'ರ' ಕಾರ ಅನೇಕ ಬಾರಿ ಬಳಕೆಯಾಗಿ ವಿಷಯ ಸ್ಪಷ್ಟವಾಗಿರುವುದು ಕಾಣುತ್ತದೆ. ಹಾಗೆಯೇ "ನೀನೀಶನೀಯದೆ ಮಾನೀಸನೀವನೆ", ಎಂಬುದಕ್ಕೂ ಸಹಜ ಪ್ರಾಸಕ್ಕೆ ಉದಾಹರಿಸಬಹುದು.

ಈತನ ವಚನಗಳಲ್ಲಿ 'ದೇಸಿ'ಯ ಸೊಗಸು ಮೂಡಿ ಬಂದಿರುವುದು 'ಎಡರಡಸಿದಲ್ಲಿ

ಮೃಡ ನಿಮ್ಮ ನೆನೆವರು', 'ಎಳ್ಳಿಲ್ಲದ ಗಾಣದಲ್ಲಿ ಎಣ್ಣೆಯುಂಟೆ', 'ಇಂತೆಂದ ಗಗನವ', 'ಇಂತೆಂದ ಭೂಮಿಯ', 'ಕಾತಕಳವೆ', 'ಕಚ್ಚುವರು ಬೊಗಳುವರು', 'ಅಂಬಲಿ ಅಳೆಯಾಗಿ ತುಂಬಿಯ ಮೇಲೋಗರವಾಗಿ', 'ಭಕ್ತನ ಮನೆಯ ಹಿತ್ತಿಲಬೇಲಿಯಾಗಿಪ್ಪೆ', ಎಂಬ ಮಾತುಗಳಲ್ಲಿ ವ್ಯಕ್ತವಾಗುತ್ತದೆ. ಮಾತಿನ ಮರ್ಮವರಿತು ಹದ-ಹವಣರಿತು ಮಾತುಗಳನ್ನು ಬಳಸುವಲ್ಲಿ ದಾಸಿಮಯ್ಯ ನಿಸ್ಸೀಮ.

ಕನ್ನಡ ಭಾಷೆ ಶಕ್ತಿಯುತವಾದದ್ದು, ಬನ್ನಿಯುಳ್ಳದ್ದು ಎಂಬುದನ್ನು ಈತನ ವಚನಗಳಲ್ಲಿ ಕಾಣಬಹುದು. 'ಮೀಸಲು'; 'ಹೊಡೆಗೆಡೆ'; 'ಮಣಿ'; 'ಬಯಲು'; 'ಓಜೆ'; 'ಬಣ್ಣ'; 'ಸೂಡು'; 'ಕಾಕೋಳಿ'; 'ತೊಜೆಯ'; 'ಈಸು' ಇತ್ಯಾದಿಗಳಿಗೆ ಉಸಿರಿತ್ತು ಮೆರೆಸಿದ್ದಾನೆ. ದಾಸಿಮಯ್ಯನಿಂದ ದಾಸನ ಕುಲವಷ್ಟೇ ಅಲ್ಲ ಕನ್ನಡ ಭಾಷೆಯೂ ದೇಸಿವಡೆದು ಉದ್ಧಾರವಾಯಿತು.

"ಇವನ ವಚನಗಳಲ್ಲಿ ಜೀವಕಳೆಯಿದೆ. ಈತ ಹೇಳಬೇಕಾದ ಮಾತುಗಳನ್ನು ಮನಮುಟ್ಟುವ ಹಾಗೆ ಹೇಳುತ್ತಾನೆ. ಆ ವಚನಗಳಲ್ಲಿ ತತ್ವ ಶುಷ್ಕವಾದ ನಿರೂಪಣೆಯಿಲ್ಲ. ಉದಾತ್ತವಾದ ಭಾವಗಳನ್ನು ಬಹು ಚಮತ್ಕಾರಯುತವಾಗಿ, ಸುಲಭವಾದ ಮಾತುಗಳಲ್ಲಿ, ಓದಿದೊಡನೆಯೇ ಮನಸ್ಸಿಗೆ ಹಿಡಿಯುವ ಹಾಗೆ, ಒಂದೊಂದು ದೊಡ್ಡ ಚಿತ್ರಣವೇ ಕಣ್ಣೆದುರಿಗೆ ನಿಂತ ಹಾಗೆ ಬರೆಯುವುದರಲ್ಲಿ . . . . . ಕುಶಲನು". ಎಂಬ ಡಿ.ಎಲ್.ಎನ್. ಅವರ ಮಾತುಗಳು ಎಂದೆಂದಿಗೂ ನಿಲ್ಲುವಂತಹವಗಳಾಗಿವೆ.

ಬಸವ ಪೂರ್ವಯುಗದ ಶ್ರೇಷ್ಠ ವಚನಕಾರ ದಾಸಿಮಯ್ಯ. ಚಂಪೂ ಪರಂಪರೆ ತನ್ನೆಲ್ಲ ಸಾಧ್ಯತೆಯನ್ನೂ ಪ್ರಕಟಗೊಳಿಸಿದನಂತರ ಈ ವಚನ ಪರಂಪರೆ ತಲೆ ಎತ್ತಿ ಜನ ಸಮ್ಮುಖವಾಗಿ ಮರುಹುಟ್ಟು ಪಡೆಯಲು ತವಕಿಸುತ್ತಿತ್ತು. ವೀರಶೈವ ಧರ್ಮವು ಪರಿಷ್ಕಾರಗೊಂಡು ಹೊಸರೂಪು ಪಡೆಯಲು ಹಾತೊರೆಯುತ್ತಿತ್ತು. ಈ ಸಂಧಿಕಾಲದಲ್ಲಿ ಬಂದ ದಾಸಿಮಯ್ಯ ಪ್ರತಿಭಾಶಾಲಿಯೂ ಹೌದು, ಅನುಭವ-ಅನುಭಾವಗಳಲ್ಲಿ ಪ್ರಸಿದ್ಧನೂ ಹೌದು. ಈತನ ವಚನಗಳ ಮುಖ್ಯ ಗುಣ, ಸಂಕ್ಷಿಪ್ತತೆ, ಸರಳತೆ ಹಾಗೂ ಅರ್ಥ ಪ್ರಾಚುರ್ಯ. ಸಾಮಾಜಿಕ ಜೀವನದ ಹಲವು ವೈಪರೀತ್ಯಗಳ ವಿಡಂಬನೆ ಹಾಗೂ ಕಟುಟೀಕೆಯನ್ನು ಈತನ ವಚನಗಳಲ್ಲಿ ಕಾಣಬಹುದು. ಈ ಹೊಸ ಸಾಹಿತ್ಯ ಪ್ರಕಾರಕ್ಕೆ ಹೊಸ ಹೊಸ ಆಯಾಮಗಳನ್ನು ಗುರುತಿಸಿಕೊಟ್ಟವನು ದಾಸಿಮಯ್ಯ.

ದಾಸಿಮಯ್ಯನ ವಚನಗಳನ್ನು ಓದಿದಾಗ ಜೀವನಮೌಲ್ಯ, ಆದರ್ಶ, ಆಚರಣೆಗಳು ಒಡಮೂಡಿರುವುದು ಕಾಣುತ್ತದೆ. ಹಾಗೆಯೇ ಆ ಮಾತುಗಳಲ್ಲಿ ನೆಲದ ಸೊಗಡು ಗಮ್ಮೆಂದು ನಮ್ಮನ್ನು ಆವರಿಸುತ್ತದೆ.



ಅಂಬಲಿ ಅಳೆಯಾಗಿ ತುಂಬೆಯ ಮೇಲೋಗರವಾಗಿ
ಉಂಬ ಸದುಭಕ್ತನ ಮನೆಯಾಗಿ,
ಲೋಕದ ಡಂಭಕರ ಮನೆಬೇಡ ರಾಮನಾಥ.

**ಜೇಡರ ದಾಸಿಮಯ್ಯ**





# ಅಕ್ಕನ ವಚನಗಳ ನಿರ್ವಚನ

ಶ್ರೀ ಬಿದರಹಳ್ಳಿ ನರಸಿಂಹಮೂರ್ತಿ

**ಚಿಲಿಮಿಲಿ ಎಂದುಓದುವ ಗಿಳಿಗಳಿರಾ,\ ನೀವು ಕಾಣಿರೆ, ನೀವು ಕಾಣಿರೆ.**
**ಸರವೆತ್ತಿ ಪಾಡುವ ಕೋಗಿಲೆಗಳಿರಾ,\ ನೀವು ಕಾಣಿರೆ, ನೀವು ಕಾಣಿರೆ.**
**ಎರಗಿ ಬಂದಾಡುವ ತುಂಬಿಗಳಿರಾ,\ ನೀವು ಕಾಣಿರೆ, ನೀವು ಕಾಣಿರೆ.**
**ಕೊಳನತಡಿಯೊಳಾಡುವ ಹಂಸೆಗಳಿರಾ,\ ನೀವು ಕಾಣಿರೆ, ನೀವು ಕಾಣಿರೆ.**
**ಗಿರಿ ಗಹ್ವರದೊಳಗಾಡುವ ನವಿಲುಗಳಿರಾ,\ ನೀವು ಕಾಣಿರೆ, ನೀವು ಕಾಣಿರೆ.**
**ಚೆನ್ನಮಲ್ಲಿಕಾರ್ಜುನನೆಲ್ಲಿದ್ದಹನೆಂದು ಹೇಳಿರೆ.**

**(ಸ.ವ.ಸಂ, ಶಿವಶರಣೆಯರ ವಚನಸಂಪುಟ, ಸಂ:ಡಾ.ವೀ.ರಾಜೂರ,೧೯೯೩, ವ-೧೭೪, ಪು.೫೫)**

ಕನ್ನಡ ಭಾವಗೀತೆಯ ಜನನಿ ಮಹಾದೇವಿಯಕ್ಕನ ಇನ್ನೊಂದು ಜನಪ್ರಿಯ ವಚನವಿದು. ಗೀತೆಯ ಭಾವಸಂವಹನಕ್ಕೆ ಪದಲಾಲಿತ್ಯ ಪುನರುಚ್ಚರಣೆ ಆದಿಪ್ರಾಸ ಅಂತ್ಯಪ್ರಾಸ ಅನುಪ್ರಾಸ ಎಷ್ಟು ಸಹಕಾರಿಯಾಗಬಲ್ಲವೆಂಬುದರ ಪ್ರಾತ್ಯಕ್ಷಿಕೆಯಾಗಿಯೂ ಈ ವಚನವನ್ನು ಪರಿಭಾವಿಸಬಹುದಾಗಿದೆ. ಜನಸಾಮಾನ್ಯರ ದಿನನಿತ್ಯದ ಆಡುಮಾತಿನ ಶಬ್ದಗಳಿಗೆ ಮಂತ್ರಮಾಯೆ ಚಿಮುಕಿಸಬಲ್ಲ ಕವಿ\ಕವಯಿತ್ರಿ ಆಮೂಲಕ ಅದ್ಭುತ ಪ್ರಭಾವ ಬೀರುವುದಕ್ಕು ಉದಾಹರಣೆಯಂತಿರುವ ರಚನೆಯಿದು. ಚೆನ್ನಮಲ್ಲನನ್ನರಸಿ ಹೊರಟ ಅಕ್ಕ ಉಡುತಡಿ-ಕಲ್ಯಾಣದ ಹಾದಿಯಲ್ಲೊ ಅಥವ ಕಲ್ಯಾಣ-ಶ್ರೀಶೈಲದ ಹಾದಿಯಲ್ಲೊ ಹಿಂಡು ಹಿಂಡು ಗಿಳಿ ಕೋಗಿಲೆ ತುಂಬಿ ಹಂಸೆ ನವಿಲುಗಳ ಕಂಡು ಥಟ್ಟನಲ್ಲೆ ಈ ವಚನ ಕಟ್ಟಿಹಾಡಿದಳೊ, ಶ್ರೀಶೈಲ ತಲುಪಿ ಕದಳಿವನದ ಗುಹಾವಾಸಿಯಾಗಿ ನೆಲೆಸಿದ ಮೇಲೆ ಆ ರಮಣೀಯ ಪರಿಸರದಲ್ಲಿ ತನ್ನ ಸುದೀರ್ಘ ಪ್ರೀತಿ-ಪಯಣದ ನೆನಪುಗಳನ್ನೆಲ್ಲ ಕ್ರೋಢೀಕರಿಸಿ ರಚಿಸಿದಳೊ ಗೊತ್ತಿಲ್ಲ. ಭಾವಾಭಿವ್ಯಕ್ತಿಯ ಸುಭಗತೆ ದೃಷ್ಟಿಯಿಂದ ಆಶುಕವಿತೆಯಂತೆ ಕಾಣುವ ಈ ವಚನ, ಗೇಯತೆ ಭಾಷಿಕ ನೈಪುಣ್ಯದ ನಿಟ್ಟಿಂದ ಪ್ರಶಾಂತ ಏಕಾಂತದ ಸೃಷ್ಟಿಯೆನಿಸತ್ತೆ. ವರ್ಡ್ಸ್‌ವರ್ತ್ ಹೇಳುವ 'Spontaneous overflow of powerful feeling' ಎಂಬಂತಿರುವ ಈ ರಚನೆ 'emotion recollected in tranquility' ಆಗಿರಬಹುದಲ್ಲವೆ ಎನಿಸತ್ತೆ. ಪ್ರಕೃತಿ ಮಾತೆ ಎಲ್ಲ ಜೀವಿಗಳಿಗೂ ಅವುಗಳ ಕ್ರೀಡಾಕಾಯಕ ಹಂಚಿಕೊಟ್ಟಿದ್ದಾಳೆ. ಬುದ್ಧಿಜೀವಿ ಗಿಳಿಗಳಿಗೆ ಚಿಲಿಮಿಲಿ ಎಂದು ಓದುವುದೆ ಕೆಲಸ. ಮನುಷ್ಯ ಮಾನವಿಯರ ಮಾತನನುಕರಿಸುತ್ತ, ಉರು ಹೊಡೆದು ಗಳಹುವುದಕ್ಕೆ ನುಡಿಗಟ್ಟಾಗಿ ಬಿಟ್ಟಿದೆ ಗಿಳಿರಾಮ. ಅರ್ಥಕೋಶದಲ್ಲಿ ಚಿಲಿಮಿಲಿ ಶಬ್ದಕ್ಕೆ ಅರ್ಥ ಸಿಗುವುದಿಲ್ಲ. ಅದು ಗಿಳಿಗಳ ಉಲಿಯನ್ನೆ ಯಥಾವತ್ ಅಣಕು ಮಾಡುವ ಈ ಅನುಕರಣಾವ್ಯಯ ಎಂಬ ವಿವರಣೆ ಸಿಕ್ಕೀತು ಅಷ್ಟೆ. ಯಾಕೆಂದರೆ ಅದು ಅರ್ಥ ಬೇಡುವ ಸ್ವತಂತ್ರ ಶಬ್ದವೆ ಅಲ್ಲ; ಅರ್ಥ ಅದರ ಉದ್ದೇಶವೂ ಅಲ್ಲ. ಕೇಳುವ ಕಿವಿಗೆ ಗಿಳಿಯುಲಿಯ ನೆನಪು\ಕಲ್ಪನೆ ನೀಡಲೆಂದೆ ಹುಟ್ಟಿಕೊಂಡ onomatopoeic ಶಬ್ದ ಅದು. ಹೊಕ್ಕುಳಾಳದ ಸ್ವರ ಹೊರತಂದು ಕೊರಳೆತ್ತಿ ಹಾಡಿ ಶ್ರಾವಣ ಚೆಲುವಿಕೆಯಿಂದ ಲೋಕ ತಣಿಸುವ ಕೋಗಿಲೆಗೆ ಹಾಡುವುದೆ ಕಾಯಕ. ಕರುಳು ಚುರುಗುಟ್ಟಿಸುವ ಕುಕಿಲಿನ ಕೋಗಿಲೆ ಜಾನಪದ ಹಾಗು ಶಾಸ್ತ್ರೀಯ ಸಂಗೀತದ

ಮೂಲಸ್ರೋತವೆ ಆಗಿದೆ. ಇನ್ನು ಈ ವಚನದಲ್ಲಿ ತುಂಬಿ, ಹಂಸೆ, ನವಿಲು ಮೂರಕ್ಕೂ ಬಳಕೆಯಾದ 'ಆಡುವ' ಕ್ರಿಯಾಪದ ಕಲಾಭಿವ್ಯಕ್ತಿಯ 'ಕ್ರೀ'ಯಾಗುವಲ್ಲಿ ಸೂಕ್ಷ್ಮ ವ್ಯತ್ಯಾಸ ತಾಳತ್ತೆ. ತುಂಬಿಗಳ ಆಟ 'ಭೃಂಗದ ಸಂಗೀತವಾಗಿ ಕೇಳಿಸಿದರೆ', ನವಿಲಿನ ಆಟ 'ನಾಟ್ಯವಾಗಿ ಕಾಣಿಸುತ್ತದೆ', ಹಂಸೆಗಳ ಆಟ 'ರಸಾಸ್ವಾದನ ವಿಹಾರವಾಗಿ ಮನಸ್ಸಿಗಿಳಿಯುತ್ತದೆ'. ಹೀಗೆ ಆಟ ಅರ್ಥಾತ್ ಕ್ರೀಡೆ ಕಲಾತ್ಮಕ ಚೆಲುವಿನ ಲಾಸ್ಯಲೀಲೆಯಾಗುತ್ತದೆ. ಹರಿವನೀರ ಹಳ್ಳ ಹೊಳೆ ಅಷ್ಟಾಗಿ ಪಸುಗದು ಹಂಸೆಗಳಿಗೆ; ಅವು ಹಾರುವ ಲಾಸ್ಯಕ್ಕೆ ತೇಲುವ ವಿಲಾಸಕ್ಕೆ ನಿಶ್ಚಿಂತವಾಗಿ ನಿಂತನೀರಿನ ಕೊಳ\ಸರೋವರಗಳೆ ಪ್ರಶಸ್ತ; ನವಿಲುಗಳ ಆವಾಸ ಸ್ಥಾನ ಗಿರಿಗಹ್ವರ ಅರ್ಥಾತ್ ಗುಡ್ಡದಗವಿ\ ತೆಗ್ಗುದಿಣ್ಣೆ\ಮರಡಿ ಬಿಲ ಎಂಬ ನಿಸರ್ಗ ಸಹಜ ಸಂಗತಿಗಳನ್ನ ಅಕ್ಕ ನೇರವಾಗಿ ನೈಸರ್ಗಿಕ ವಿಶ್ವವಿದ್ಯಾಲಯದಿಂದಲೆ ಅರಿತಿದ್ದಾಳೆ. 'ಕಾಣಿರೆ, ಕಾಣಿರೆ' ಪುನರುಚ್ಚರಣೆ ಅನೇಕ ಭಾವಾರ್ಥ ಪದರಗಳಲ್ಲಿ ಅನುರಣಿಸುವುದು ಸೋಜಿಗದ ಸಂಗತಿ: ಅ) ನಿಮ್ಮನಿಮ್ಮ ನೈಸರ್ಗಿಕ ಕ್ರೀಡೆಯ ಲೀಲಾಭಾವದಲ್ಲಿ ತಲ್ಲೀನರಾದ ನಿಮಗೆ ಇದೇ ಹಾದಿಯಾಸಿ ಹಾದುಹೋದ ಸುಲಿಪಲ್ಲ ಗೊರವ ಚೆನ್ನಮಲ್ಲ ಕ್ವಚಿತ್ತಾಗಿಯಾದರೂ ಕಾಣಿಸಲಿಲ್ಲವೆ? ಆ) ಹೋಗಲಿ ಬಿಡಿ, ನೀವು ಅವನನ್ನ ನಿಮ್ಮ ಹೊರಗಣ್ಣಿಂದ ಕಾಣಲಾರಿರಿ ಇ) ಆದರೆ ನಿಸರ್ಗಾನುಭಾವಿಗಳೆ ಆದ ನಿಮ್ಮ ಸುತ್ತಮುತ್ತ ಸದಾ ಆವರಿಸಿಕೊಂಡಿರುವ ಚೆನ್ನಮಲ್ಲಿಕ ನಿಮ್ಮೊಳಗಣ್ಣಿಗೂ ಕಾಣಿಸಲೆಯಿಲ್ಲವೆ? –ಎಂಬೆಲ್ಲ ಅರ್ಥಛಾಯೆಗಳು ಅಡಗಿರುವಂತೆ ಕಾಣಿಸತ್ತೆ. 'ಚೆನ್ನಮಲ್ಲಿಕಾರ್ಜುನನೆಲ್ಲಿದ್ದಹನೆಂದು ಹೇಳಿರೆ'ಎಂಬ ಕಡೆಸಾಲುಒಮ್ಮೆ ನೇರ ಸರಳ ಪ್ರಶ್ನೆಯಂತೆ ಕಂಡರೆ, ಇನ್ನೊಮ್ಮೆ 'ಹೇಳಿ ನೋಡೋಣ'ಎಂಬ ಒಗಟು\ಜಾಣ್ಮೆಪರೀಕ್ಷೆಯ ಪ್ರಶ್ನೆಯಾಗಿ ಕಾಣಿಸತ್ತೆ. 'ಕಣ್ಣಾಮುಚ್ಚೆ ಕಾಡೇಗೂಡೆ' ಎನ್ನುತ್ತ ಅಜ್ಜಿ ಮಗುವಿನ ಕಣ್ಣುಗಳಿಗೆ ತನ್ನಂಗೈಗಳ ಮುಚ್ಚಿ ಉಳಿದ ಮಕ್ಕಳಿಗೆ ಅಡಗಿಕೊಳ್ಳಲು ಸನ್ನೆಮಾಡಿ 'ನಮ್ಮಯ ಹಕ್ಕಿ ನಿಮ್ಮಯ ಹಕ್ಕಿ ಬಿಟ್ಟೇ ಬಿಟ್ಟೆ' ಎಂದು ಹುಡುಕಲು ಹಚ್ಚುವ ಮಕ್ಕಳಾಟ ಸಾಂಕೇತಿಕವಾಗಿ ಅಭಿನೀತವಾದಂತೆಯೂ ಅನ್ನಿಸತ್ತೆ ಈ ವಚನದಲ್ಲಿ. ಪ್ರೀತಿಯ ಪವಾಡಕ್ಕೆ ಅಸಾಧ್ಯವಾವುದು?! ಆದರೆ ಹೀಗೆ ನಿಸರ್ಗಾನುಭಾವಿಯಾಗಿ ಸಕಲ ಚರಾಚರಗಳಲ್ಲು ತನ್ನ ಮನದನ್ನ ಚೆನ್ನಮಲ್ಲನನ್ನ ಅರಸುತ್ತ ಸಂಭ್ರಮಿಸುವ ಅಕ್ಕ, ಇನ್ನೊಂದು ವಚನದಲ್ಲಿ ಆಧ್ಯಾತ್ಮಿಕ ಶಿಖರವೇರಿದ ವೈರಾಗ್ಯ ಶಿಖಾಮಣಿಯಾಗಿ "ಎನ್ನಸುತ್ತಿದ ಮಾಯಾಪ್ರಪಂಚವ ಬಿಡಿಸಾ ನಿಮ್ಮಯ ಧರ್ಮ" ಎಂದು ಗೋಗರೆಯುವುದು ವಿಪರ್ಯಾಸವೆನಿಸುವುದಿಲ್ಲವೆ? ಆಕೆ ಸೂಚಿಸುವ 'ಮಾಯಾ ಪ್ರಪಂಚ' ನಿಸರ್ಗ–ನಾಗರಿಕತೆ ಎರಡೂ ಬಗೆ ಪರಿಸರಗಳನ್ನ ಒಳಗೊಂಡ ಅಖಂಡ ಜಗತ್ತಿನ ಒಟ್ಟು ಬದುಕೆಂಬಂತೆ ಗೋಚರವಾಗತ್ತೆ. ಇದನ್ನು ಆಳವಾಗಿ ಪರಿಶೀಲಿಸಿದಾಗ ಅಕ್ಕನ ಅನುಭಾವ ಪಥದಲ್ಲಿ ಸಾಧನೆಯ ಅನೇಕ ಹಂತಗಳಿರುವಂತೆಯೂ, ಅವಳ ವಚನಗಳು ಅಂಥ ವಿವಿಧ ಪಂತಗಳ ವಿಭಿನ್ನ ಮನಸ್ಥಿತಿಯ ಅಭಿವ್ಯಕ್ತಿಯಾಗಿರುವಂತೆಯೂ ಭಾಸವಾಗತ್ತೆ. ಅವನ್ನೆಲ್ಲ ಒಂದೆ ಬಗೆ ತಾತ್ವಿಕತೆಗೆ ಹೊಂದಿಸೋದು ಕಷ್ಟ. ಅನುಭಾವಿಗಳೆ ಹಾಗೆ. ಅವರು ವಿಶ್ವಾತ್ಮಕ ದ್ರಷ್ಟಾರರು. ಆ ಗಳಿಗೆಯಲ್ಲಿ ಕಂಡ ಅಖಂಡ ಸತ್ಯದ ಮಿಂಚು ಕೆಂಡ ಹಿಡಿದು ತೋರುವರು ಅಷ್ಟೆ. ಯಾವುದೊ ಮಾನವ ನಿರ್ಮಿತತತ್ವ\ಸಿದ್ಧಾಂತದ ತಾರ್ಕಿಕ ಚೌಕಟ್ಟಿನೊಳಗೆ ಬಂಧಿತರಾಗಿರುವ ಜಾಯಮಾನದವರಲ್ಲ. ಅದರಿಂದಾಗಿಯೆ ಅವರ ನುಡಿಗಳಲ್ಲಿ ಆಗಾಗ ವೈರುಧ್ಯಗಳು ವಿರೋಧಾಭಾಸಗಳು ಎದ್ದು ಕಾಣುವುವು. ಆದರೆ ವ್ಯಾಪಕ ಅನೇಕತೆಯಿಂದ ಏಕತೆಯ ಏಕಾಗ್ರತೆಗೇರುವ ಆ ನುಡಿಗಳೆಲ್ಲ ಲೋಕಕಾರುಣ್ಯ ಉದಾತ್ತಭಕ್ತಿ ಉನ್ನತಪ್ರೇಮದ ಅಭಿವ್ಯಕ್ತಿಯೆ ಆಗಿರುತ್ತವೆಂಬುದನ್ನಯಾರೂ ಮರೆಯುವಂತಿಲ್ಲ. ಈ ಮೇಲಿನ



ವಚನ ಹಾಗು 'ಅಳಿಸಂಕುಲವೆ, ಮಾಮರವೆ, ಬೆಳುದಿಂಗಳೆ'(ಅದೆ, ವ.೪೩, ಪು.೧೭)ಎಂಬ ವಚನ ಗಿಳಿ ಕೋಗಿಲೆ ತುಂಬಿ\ಅಳಿ ಹಂಸೆ ನವಿಲು ಮಾಮರದಂತ ಜೀವರಾಶಿಗಷ್ಟೆ ಅಲ್ಲದೆ ಬೆಳದಿಂಗಳಂಥ ವಿಶ್ವವ್ಯಾಪಾರಕ್ಕು ಮಾನವೀಯ ವ್ಯಕ್ತಿತ್ವ ತುಂಬಿ (personification) ಅವನ್ನೆಲ್ಲ ಸಖಿ\ಕೆಳದಿಯರಾಗಿಸಿ ಅಕ್ಕನ ನಿಸರ್ಗಾನುಭಾವದ ಮೊದಲ\ಸಾಧನಾ ಹಂತವನ್ನು ಸೂಚಿಸುತ್ತವಾದರೆ, 'ವನವೆಲ್ಲ ನೀನೆ'ಎಂದು ಶುರುವಾಗಿ 'ಸರ್ವಭರಿತನಾಗಿ ಎನಗೇಕೆ ಮುಖದೋರೆ?' (ಅದೆ, ವ.೩೦೦, ಪು.೯೨) ಎಂದು ಚೆನ್ನಮಲ್ಲಿಕಾರ್ಜುನನಿಗೆ ಮೊರೆಯಿಡುವ ವಚನ ಆ ನಿಸರ್ಗಾನುಭಾವದ ಎರಡನೆ\ಪರಿಪಕ್ವ ಹಂತವನ್ನು ಸೂಚಿಸುತ್ತದೆ. ಅದರಲ್ಲಾಗಲೆ ಅಕ್ಕ ತನ್ನ ನಲ್ಲ ಸಕಲ ಚರಾಚರಗಳಲ್ಲು ಅಡಗಿರುವ ವಿಶ್ವವ್ಯಾಪಿ ಎಂಬರಿವು ಪಡೆದಿದ್ದಾಳೆ. ಕದಳಿಬನದಲ್ಲಿ ಚೆನ್ನಮಲ್ಲನೊಳಗೆ ಒಂದಾದಮೇಲಿನ ಪರಿಣಾಮ ಬಣ್ಣಿಸುವ ವಚನದಲ್ಲಿ ಮೂರನೆ\ಅಂತಿಮಹಂತ ಅನಾವರಣಗೊಂಡಿದೆ: 'ಲಿಂಗವೆನ್ನೆ ಲಿಂಗೈಕ್ಯವೆನ್ನೆ, ಸಂಗವೆನ್ನೆ ಸಮರಸವೆನ್ನೆ.\ಆಯಿತೆನ್ನೆ ಆಗದೆನ್ನೆ, ನೀನೆನ್ನೆ ನಾನೆನ್ನೆ.\ ಚೆನ್ನಮಲ್ಲಿಕಾರ್ಜುನಯ್ಯಾ,\ ಲಿಂಗೈಕ್ಯವಾದ ಬಳಿಕ ಏನೂ ಎನ್ನೆ'(ಅದೆ, ವ.೨೯೨, ಪು.೯೦); ನಾನು–ನೀನು ಎಂಬ ಲೌಕಿಕ ಪ್ರೇಮದ ಗಡಿದಾಟಿ ಉಭಯ ಭಾವವಳಿದು ಅವನಲ್ಲೆ ಅದ್ವಯವಾಗಿ ಬೆರೆತು ನಿಶ್ಶೂನ್ಯವಾಗಿ ಹೋಗುವ ಪರಾಭಕ್ತಿಯ ಸ್ವಾನುಭಾವ ಸುಖವದು. ನಾವೆಲ್ಲ ತಾರ್ಕಿಕವಾಗಿ ಆತುಕೊಂಡಿರುವ ಲೌಕಿಕ ಪರಿಭಾಷೆ, ಅಕ್ಕ ಭೌತಿಕವಾಗಿ ಇಲ್ಲವಾದ ಮೇಲು ಈ ವಚನ ರಚನೆ ಮಾಡಿದಳೆಂದು ನಂಬುವುದು ಅಸಾಧ್ಯ. ನೆನಪಿರಲಿ, ಇಚ್ಛಾಮರಣಿಗಳು ಇದ್ದರು; ಇದ್ದಾರೆ; ಇದ್ದೇಯಿರುತ್ತಾರೆ. ಅಂಥವರು ಕೊನೆಗಳಿಗೆವರೆಗು ಪ್ರಜ್ಞಾವಂತಿಕೆಯಿಂದ ಉರಿಯುತ್ತ ತಮ್ಮೆಲ್ಲ ಆಧ್ಯಾತ್ಮಿಕ\ ಅನುಭಾವಿಕ ಹೊಣೆಗಾರಿಕೆ ತೀರಿಸಿಯೆ ಪರಶಿವನಲ್ಲಿ ಬೆರೆಯುತ್ತಾರೆ. ವಿಜ್ಞಾನವೂ ಇದನ್ನು ತಳ್ಳಿಹಾಕುವಂತಿಲ್ಲ.

■



ಮೊರನ ಹೊಲಿವ ಗವರ ನಾನೆತ್ತಬಲ್ಲೆನು?
ಕಟ್ಟಿಕೊಂಡಾತ ಭಕ್ತನಪ್ಪನೆ, ಕೆಡಹಿದಾತದ್ರೋಹಿಯಪ್ಪನೆ?
ಆ ಲಿಂಗವು ಕಟ್ಟಲಿಕೆ, ತನ್ನ ಕೈಯಲ್ಲಿಪ್ಪುದೆ?
ಕೆಡಹಲಿಕೆ, ಬೀಳಲು ಬಲ್ಲದೆ?
ಆ ಲಿಂಗ ಬಿದ್ದ ಬಳಿಕ, ಜಗತ್ತು ಉಳಿಯಬಲ್ಲುದೆ?
ಆ ಪ್ರಾಣಲಿಂಗ ಬಿದ್ದ ಬಳಿಕ, ಜಗತ್ತು ಉಳಿಯಬಲ್ಲುದೆ?
ಆ ಲಿಂಗ ಬಿದ್ದಿತ್ತೆಂಬ ಸೂತಕದ ಶಬ್ದ ಭ್ರಾಂತುವಿನ ಪುಂಜ
ಅಂತು ಅದ ಕೇಳಲಾಗದು
ಯುಗಜುಗಂಗಳು ಗತವಹವಲ್ಲದೆ, ಲಿಂಗಕ್ಕೆ ಗತ ಉಂಟೆ
ಲಿಂಗ ಬಿದ್ದಿತ್ತೆಂದು ನಿಂದಿಸಿ ನುಡಿವ ದ್ರೋಹಿಗಳ ಮಾತಕೇಳಲಾಗದು
ಗವರೇಶ್ವರಾ.

**ಮೇದರ ಕೇತಯ್ಯ**

# ಚಾಮರಸನ ಪ್ರಭುಲಿಂಗಲೀಲೆಯ ಪ್ರಶಸ್ತಿ ವಾಕ್ಯ ಹೆಚ್ಚಿನ ವಿವರ ಮತ್ತು ಅಲ್ಲಮನ ಹೊಸ ವಚನ

ಡಾ. ಬಿ. ನಂಜುಂಡಸ್ವಾಮಿ

ಅಲ್ಲಮಪ್ರಭುವಿನ ಜೀವನ ಚಿತ್ರಿಸುವ ಮಹತ್ತ್ವವಾದ ಗ್ರಂಥಗಳ ಪೈಕಿ "ಚಾಮರಸನ ಪ್ರಭುಲಿಂಗಲೀಲೆ"ಗೆ ವಿಶೇಷವಾದ ಸ್ಥಾನ. ಪ್ರಭುಲಿಂಗಲೀಲೆ ರಚನೆಯಾದ ದಿನದಿಂದ ನಿರಂತರವಾಗಿ ಅಧ್ಯಯನಕ್ಕೆ ಒಳಪಟ್ಟ ಗ್ರಂಥ, ಅಲ್ಲದೆ ತಮಿಳು, ತೆಲುಗು, ಮರಾಠಿ ಮತ್ತು ಸಂಸ್ಕೃತ ಭಾಷೆಗೆ ಭಾಷಾಂತರಗೊಂಡಿದೆ. ಭಾರತ ದೇಶದ ಹಸ್ತಪ್ರತಿ ಭಂಡಾರದಲ್ಲಿ ಪ್ರಭುಲಿಂಗಲೀಲೆಯ ನೂರಕ್ಕೂ ಹೆಚ್ಚು ಹಸ್ತಪ್ರತಿಗಳು ಸಂಗ್ರಹಗೊಂಡಿವೆ. ಪ್ರಭುಲಿಂಗಲೀಲೆಯನ್ನು ಪ್ರತಿಮಾಡುವ ಲಿಪಿಗಾರರು ಗ್ರಂಥದ ಆದಿಯಲ್ಲಿ, ಅಂತ್ಯದಲ್ಲಿ ಪ್ರತಿ ಸಂಧಿಯ ಆದಿಯಲ್ಲಿ ಬಸವಾದಿ ಶರಣರ ವಚನಗಳನ್ನು ಪ್ರತಿಮಾಡುತ್ತಾ ಬಂದಿದ್ದಾರೆ. ಈ ಬಸವಣ್ಣನವರ ಕಾಲಾನಂತರ ವಚನ ಸಾಹಿತ್ಯಾಸಕ್ತರಿಂದ ಸೂಕ್ಷ್ಮವಾಗಿ ಅಧ್ಯಯನಕ್ಕೆ ಒಳಪಟ್ಟಿದೆ. ಪ್ರಭುಲಿಂಗಲೀಲೆಯ ಕೆಲವೊಂದು ಹಸ್ತಪ್ರತಿಗಳಲ್ಲಿ ನೂರಕ್ಕೂ ಹೆಚ್ಚು ವಚನಗಳು ಇರುವ ಹಸ್ತಪ್ರತಿಯನ್ನು ಲಿಂ॥ಪ್ರೊ॥ ಶಿ.ಶಿ. ಬಸವನಾಳರು ಗುರುತಿಸಿದ್ದರು. ಈ ಹಸ್ತಪ್ರತಿ ತಜ್ಞರಾದ ಲಿಂ. ಎಸ್. ಶಿವಣ್ಣನವರು ನನ್ನ ಹತ್ತಿರ ಅನೇಕ ಸಾರಿ "ಪ್ರಭುಲಿಂಗಲೀಲೆ ಹಸ್ತಪ್ರತಿಗಳಲ್ಲಿ" ನಮಗೆ ಹೊಸವಚನಗಳು ಲಭ್ಯವಾಗುವ ಸಾಧ್ಯತೆ ಇದೆ ಎಂದು ಹೇಳುತ್ತಾ ಇದ್ದರು.

ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಸಂರಕ್ಷಿಸಿರುವ ೧೪೪೭ನೇ ನಂಬರಿನ ಪ್ರಭುಲಿಂಗಲೀಲೆಯ ಹಸ್ತಪ್ರತಿಯಲ್ಲಿ ನೂರಕ್ಕೂ ಹೆಚ್ಚು ವಚನ ಲಿಖಿಸಲ್ಪಟ್ಟಿದೆ. ಸಂಶೋಧನಾಸಕ್ತಿ ಇರುವ ವಿದ್ಯಾರ್ಥಿ ಪರಿಶೀಲನೆಗೆ ಲಭ್ಯವಾಗುವ ಪ್ರಭುಲಿಂಗಲೀಲೆ ಹಸ್ತಪ್ರತಿಯನ್ನು ಪರಿಶೀಲಿಸಿದರೆ ಇದುವರೆಗೆ ನಮಗೆ ಲಭ್ಯವಾಗದ ಹಲವು ಹೊಸವಚನಗಳು ಲಭ್ಯವಾಗುವ ಸಾಧ್ಯತೆ ಇದೆ.

ಪ್ರಭುಲಿಂಗಲೀಲೆಯವರ ಕರ್ತೃ ಚಾಮರಸನ ಕಾಲ ಸು.೧೪೩೦ ಅದೇ ಕಾಲದಲ್ಲಿ ಇದ್ದವನು ಗುಬ್ಬಿಯ ಮಲ್ಲಣಾರ್ಯ (ಗಣಭಾಷಿತ ರತ್ನಮಾಲೆ ಕರ್ತೃ) ಮೊದಲನೇ ಶೂನ್ಯ ಸಂಪಾದನೆಯನ್ನು ಕರ್ತೃ ಶಿವಗಣಪ್ರಸಾದಿ ಮಹಾದೇವಯ್ಯ ಅಲ್ಲಮಪ್ರಭುವಿನ ಷಟ್ಸ್ಥಲವಚನದ ಸಂಕಲನಕಾರ ಮತ್ತು ಟೀಕಾಕಾರ ಮಹಾಲಿಂಗದೇವ, ಅವನ ಶಿಷ್ಯ ಜಕ್ಕಣಾರ್ಯ. ಈ ಎಲ್ಲಾ ಮಹನೀಯರ ಕಾಲ ಸುಮಾರು ೧೪೩೦ ಇವರುಗಳು ರಚಿಸಿದ – ಸಂಕಲಿಸಿದ – ಸಂಯೋಜಿಸಿದ ಕೃತಿಗಳಿಗೆ ಆರಂಭಿಕ ಗದ್ಯ ತದನಂತರ ಅಂತ್ಯದಲ್ಲಿ ಗ್ರಂಥಸಮಾಪ್ತಿ ಪ್ರಶಸ್ತಿ ವಾಕ್ಯಗಳು ಗದ್ಯಗಳು ಅವರವರ ಗ್ರಂಥಗಳಲ್ಲಿ ಮುದ್ರಣಗೊಂಡು ಪ್ರಚಾರದಲ್ಲಿದೆ. ಚಾಮರಸನ ಪ್ರಭುಲಿಂಗಲೀಲೆಯ ಆರಂಭಿಕ ಗದ್ಯ ಇದುವರೆಗೂ ವಿದ್ವಾಂಸರ ಸೂಕ್ಷ್ಮ ಕಣ್ಣಿಗೆ ಬಿದ್ದಿಲ್ಲ. ೧೯೪೬ರಲ್ಲಿ ಮದ್ರಾಸ್‌ನಲ್ಲಿ ಮುದ್ರಣವಾದ "A DESCRIPTIVE CATALOGUE OF THE KANNADA MANUSCRIPTS IV" ಸಂಪುಟದಲ್ಲಿ ಪ್ರಭುಲಿಂಗಲೀಲೆ (ಪ್ರಶಸ್ತಿ ಸಹಿತ) ನಂ. ೪೮೪, ನಂ. ೪೮೫, ನಂ.೪೮೬, ನಂ. ೪೮೭, ನಂ. ೪೯೦ ಇದ್ದರೆ ಪ್ರಶಸ್ತಿ ರಹಿತ ನಂ. ೪೮೮, ನಂ. ೪೯೧, ನಂ. ೪೯೨, ನಂ. ೪೯೪, ನಂ. ೪೯೫, ನಂ. ೪೯೬ ಹಸ್ತಪ್ರತಿಗಳಿವೆ. ಪ್ರಭುಲಿಂಗಲೀಲೆ (ನಂ.೪೮೪) ಹಸ್ತಪ್ರತಿಯ ಪ್ರಶಸ್ತಿಯನ್ನು ಮಾತ್ರ ಸಂಪಾದಕರು ಕೊಟ್ಟಿದ್ದಾರೆ. ಅದನ್ನು ಯಥಾವತ್ತಾಗಿ ಕೊಡಲಾಗಿದೆ. G.O.M.L. ಸಂಪುಟ IV ಸಂಪಾದಕರಾದ ಎ. ಶಂಕರನ್, ಎಂ.ಎ., ಪಿಹೆಚ್.ಡಿ., ಅವರು ಈ ಪ್ರಶಸ್ತಿ ವಾಕ್ಯವನ್ನು ಯಾರೋ ಬರೆದು ಸೇರಿಸಿರಬೇಕು ಅನ್ನುವ ಅಭಿಪ್ರಾಯ ತಾಳಿದ್ದಾರೆ. ನನ್ನ ಪ್ರಕಾರ ಅಂದಿನ ದಿನಮಾನದ ಪದ್ಧತಿಯಂತೆ ಚಾಮರಸನು ಆರಂಭಿಕ ಪ್ರಶಸ್ತಿ ಗದ್ಯವನ್ನು ಬರೆದಿದ್ದಾನೆ. ಮುಂದಿನ ಲಿಪಿಗಾರರು ಪ್ರಶಸ್ತಿ ಗದ್ಯವನ್ನು ಬಿಟ್ಟುಬಿಡುತ್ತಾ ಬಂದಿರುವುದರಿಂದ ಪ್ರಶಸ್ತಿ ಸಹಿತ, ಪ್ರಶಸ್ತಿ ರಹಿತ ಹಸ್ತಪ್ರತಿಗಳು ಲಭ್ಯವಾಗುತ್ತಾ ಬಂದಿವೆ. ಆರಂಭಿಕ ಮೂರು ಕಂದ ಪದ್ಯಗಳು ಮತ್ತು ಮತ್ತೇಭ ವಿಕ್ರೀಡಿತ ವೃತ್ತವು ಸಹ ಚಾಮರಸನದೆ. ಪ್ರಭುಲಿಂಗಲೀಲೆಯಲ್ಲಿ ವಿಶಾಗತಿ ೧೧೧೧ ಭಾಮಿನೀ ಷಟ್ಪದಿ ಪದ್ಯಗಳು ಇವೆ. ಪ್ರಶಸ್ತಿ ಇರುವ ಗ್ರಂಥದಲ್ಲಿ ಅಂತು ಗತಿ ೨೫ ಕಂ ೧೧೧೫ ಕಂ ಮಂಗಲ ಮಹಾಶ್ರೀ ವಿಭವ ಸಂವತ್ಸರದ ವೈಶಾಖ ಬ.೯ರುದವಲ್ಲು ಮಧುರೆ ಶ್ಯಾನಭಾಗ ಬಾಣಸವಾಡಿಯಲ್ಲಿ ಓದಿಸುವ ನಂಜಯ್ಯ ಬರೆದ ಪ್ರಭುಲಿಂಗಲೀಲೆ ಸಮಾಪ್ತ ನಂಜಪ್ಪಯ್ಯ ಮಂಗಳಮಹಾಶ್ರೀ ಎಂದಿದೆ.

ಚಾಮರಸನ ಪ್ರಭುಲಿಂಗಲೀಲೆ ಗತಿ೨೫ ೧೧೧೧ ಭಾಮಿನಿ ಷಟ್ಪದಿ ಇರುವುದು ನಮಗೆಲ್ಲಾ ಗೊತ್ತಿರುವುದು, ಆರಂಭದ ಒಂದು ಕಂದ, ತದನಂತರ ಮತ್ತೇಭ ವಿಕ್ರೀಡಿತ ವೃತ್ತಂ, ತದನಂತರ ಇನ್ನು ಎರಡು ಕಂದ ಇದೆ. ಗ್ರಂಥಾತ್ಯದಲ್ಲಿ ಇದ್ದ ಕಂದವನ್ನು ಹಸ್ತಪ್ರತಿಯ ವರ್ಣನಾತ್ಮಕ ಸೂಚಿ ಮಾಡಿದ ಎ. ಶಂಕರನ್ ಎಂ.ಎ., ಪಿಹೆಚ್.ಡಿ., ಅವರು ಬಿಟ್ಟಿರಬಹುದು. ಕನ್ನಡ ನಾಡಿನ ಕಿರಿಯ ವಿದ್ವಾಂಸರು "ಪ್ರಭುಲಿಂಗಲೀಲೆ" ಹಸ್ತಪ್ರತಿಗಳು ಮತ್ತು ಮುದ್ರಿತ ಪ್ರತಿಗಳ ಬಗ್ಗೆ ಸಂಶೋಧನೆ ಮಾಡಿದರೆ ಇನ್ನಷ್ಟು ವಿವರ ಖಂಡಿತ ನಮಗೆ ಲಭ್ಯವಾಗುತ್ತದೆ. ಆರಂಭದ ಪ್ರಶಸ್ತಿ ನಂತರ ಬಂದಿರುವ ಅಲ್ಲಮಪ್ರಭುವಿನ ವಚನ ೨೦೦೧ರ ವಚನ ಸಮಗ್ರ ವಚನ ಸಂಪುಟ ೨, ೧೫೭೬ ಬೈಬಲ್ ಆವೃತ್ತಿ ೧೫೫೪, ೨೦೧೬ರ ವಚನದ ಭಾವವನ್ನು ಹೋಲುತ್ತದೆಯಾದರೂ ಸಾಕಷ್ಟು ವ್ಯತ್ಯಾಸಗಳಿವೆ. ಆದ್ದರಿಂದ ಈ ವಚನವನ್ನು ಅಲ್ಲಮಪ್ರಭುವಿನ ಹೊಸವಚನವೆಂದು ಸ್ವೀಕರಿಸಬಹುದು.

**ಮದ್ರಾಸ್ G.O.M.L. Volume V- ೧೯೪೬ ಪುಟ ೮೦೧, ೮೦೨**

**ಪ್ರಭುಲಿಂಗಲೀಲೆ ಆರಂಭದ ಪ್ರಶಸ್ತಿ**

**ಶ್ರೀ ಕೈಲಾಸಪುರವರಾಧೀಶ್ವರನ ಧ್ಯಾನಾಕೊಡರುಮಪ್ಪ ಶಿವೈಕ್ಯರೂಪ್ಪವಂತೆಂದೊಡೆ:**

ಮತ್ತೊಪ್ಪುದುಂ ಸಿದ್ಧರಾಮಯ್ಯದೇವರು, ಗೊಗ್ಗಯ್ಯನು, ಹಡಪದಪ್ಪಣ್ಣನು, ಮಡಿವಾಳ ಮಾಚಯ್ಯ, ಕಿನ್ನರ ಬೊಮ್ಮಣ್ಣ, ನಾಗಾಯಕ್ಕನು, ಚೆನ್ನಬಸವಣ್ಣ, ಮುಕ್ತಾಯಕ್ಕನು, ಅಜಗಣ್ಣ, ಮಹಾದೇವಿಯಕ್ಕನು, ಮರುಳ ಶಂಕರದೇವರು, ಗೋರಾಕ್ಷನು, ಋಷಿಜನಂಗಳು ಇಂತಿವರಿಗೆ ಮುಖ್ಯ ತಾನಾದ ಬಸವದಂಡಾಧೀಶ್ವರನು, ಪ್ರಭುದೇವರು ಬರಲಿದಿರ್ಗೊಂಡು ಶರಣುಪೊಕ್ಕು ಪಾದಾಕ್ರಾಂತವಾಗಿ ಬಿಜಯಂಗೆಯಿಸಲು ಶೂನ್ಯಸಿಂಹಾಸನದ ಮೇಲೆ ಕುಳಿತು ಸರ್ವ ನೈವೇದ್ಯಂಗಳಂ ಕಂಡುಂಡು ಕೊಂಡಾಡಿ ಪರಿಣಮಿಸಿ ಸರ್ವರಿಗೆ ತೃಪ್ತಿಯನೆಯ್ದಿಸಿ ಆ ಗಣಂಗಳಿಗೆ ಏಕಲಿಂಗ ಶಿವೈಕ್ಯ ಪದವಿಯನಿತ್ತ ಪ್ರಭುದೇವರ ಶ್ರೀಪಾದಂಗಳನವನರತ ನೆನೆದು ಎನ್ನ ಭವಂ ನಾಸ್ತಿಯಂ ಮಾಡುವೆ. ಕೇಳಿದ ಭಕ್ತರ ಕರ್ಮಕ್ಷಯವೆಂದು ಪ್ರಭುಲೀಲಾಮೃತವ ನೋದುವೆನು ಚಿತ್ತೈಸಿ ಭಕ್ತಜನಂ . . . . .

ಸಹಜದಿಂದ ನಿರಾಲಂಬವಾಯಿತ್ತು,
ನಿರಾಲಂಬದಿಂದ ನಿರಾಳವಾಯಿತು
ನಿರಾಳದಿಂದ ನಿರವಯವಾಯಿತ್ತು
ನಿರವಯದಿಂದ ನಿರಾದಿಯಾಯಿತ್ತು
ನಿರಾದಿಯಿಂದ ಶೂನ್ಯವಾಯಿತ್ತು, ಶೂನ್ಯದಿಂದ
ನಿಶ್ಶೂನ್ಯವಾಯಿತ್ತು, ನಿಶ್ಶೂನ್ಯದಿಂದ ಮಹಾಪ್ರಕಾಶವಾಯಿತ್ತು
ಮಹಾಪ್ರಕಾಶದಿಂದ ಬೆಳಗಾಯಿತ್ತು, ಬೆಳಕಿನಿಂದ
ಘೋರಣದ ಸ್ವರೂಪವಾಯಿತ್ತು, ಕಾಣಾ ಗೋಹೇಶ್ವರಾ ॥

ಕಂದಂ :
ಶ್ರೀ ಗುರು ಗೋಹೇಶ್ವರನ ದಿ।
ವ್ಯಾಗಮ ಲೀಲೆಯಲಿ ಸಂದ ಗತಿಗಳ ಮೊದಲೊಳ್
ಕೈಗೈದು ಸಂಚಿವಿತಾರ್ಥದ
ಬಾಗೆಯನಾನೊರೆವೆನಿಳಿಗೆ ವಸ್ತುಕದಿಂದಂ॥೧॥
ಮತ್ತೇಭ ವಿಕ್ರೀಡಿತ ವೃತ್ತಂ ॥

ವಿನುತ ಶ್ರೀ ಪ್ರಭುಲಿಂಗಲೀಲೆಯೆನಲುಂ ಮೇಣ್‌ಲಿಂಗಲೀಲಾಬ್ಧಿಯೆಂ–।
ದೆನುತಂ ಭಾವಿಸೆಬಲ್ಲವರ್ಗೆ ಮುದದಿಂ ಕೈಸಾರ್ದು ತತ್ತ್ವನಿಧ – ॥
ಸೈನ ಮೇಕಾರ್ಥಯೆಂದು ಲಾಲಿಸಿ ಮಹೋತ್ಸಹಂಗಳಂ ತಾಳ್ದ ಸ ।
ಜ್ಜನಮೆಲ್ಲಂ ಸುಖಿಸುತ್ತ ಮಿರ್ಕೆ ಮೆಱೆನೆಗಾಚಂದ್ರಾರ್ಕತಾರಾಂಬರಂ॥

ಕಂದಂ:
ಪ್ರಭುಲಿಂಗಲೀಲೆಗೊಪ್ಪುವ।
ಶುಭದಿಪ್ಪತ್ತೈದು ಗತಿಗಳಂತಾ ಗತಿಯೊಳ್ ॥
ಪ್ರಭುಲಿಂಗಲೀಲೆ ಗಗನ
ಪ್ರಭೆ ಕಿಱುಗನ್ನಡಿಯೊಳೆಸೆವ ತೆಱದಿಂದೆಸೆಗುಂ।
ಮೊದಲ ಗತಿಯೊಳ್ಪುರಾತರ।
ಪವಪದ್ಮಸ್ತುತಿ ಸಮಸ್ತ ಭಕ್ತಾ ಧೀಳಾ –೧
ಸ್ವದ ದೇವತಾಭೂವಳಿ ।
ಮುದದಿಂದಂ ಪ್ರಭುಲಿಂಗಲೀಲೆಯೊಳ್ಪಸರಿಸುಗಂ ॥

ಅಂತು ಗತಿ ೨೫ ಕಂ ೧೧೧೫ ಕಂ ಮಂಗಲ ಮಹಾಶ್ರೀ ವಿಭವ ಸಂವತ್ಸರದ ವೈಶಾಖ ಬ. ೫ ನಿರುದದಲ್ಲು ಮಧುರೆ ಮಾರಸಮುದ್ರದ ಶ್ಯಾನಭಾಗ ಬಾಣವಾಡಿಯಲ್ಲಿ ಓದಿಸುವ ನಂಜಪ್ಪಯ್ಯ ಬರೆದ ಪ್ರಭುಲಿಂಗಲೀಲೆ ಸಮಾಪ್ತ ಮಂಗಳ ಮಹಾಶ್ರೀ.



**ಹಸ್ತಪ್ರತಿ ಬಗ್ಗೆ ವಿಶೇಷ ವಿವರ**

ಅತಿ ಶಿಥಿಲ, ಲಿಪಿಯು ಚೆನ್ನಾಗಿದೆ. ಅಲ್ಪಸ್ವಲ್ಪ ತಪ್ಪಿದೆ. ಇದು ವಸ್ತುಕ ಗ್ರಂಥವಾಗಿದೆ. ಇದರಲ್ಲಿ ಮೂರು ಕಂದಗಳು, ಒಂದು ಮತ್ತೇಭವಿಕ್ರೀಡಿತ ವೃತ್ತವೂ ೨೫ ಗತಿಗಳಲ್ಲಿ ಕೂಡಿ ೧೧೧೧ ಭಾಮಿನೀ ಷಟ್ಪದಿಗಳೂ ಇವೆ. ಗತಿಗಳಾದಿಯಲ್ಲಿ ಪ್ರಭುದೇವ, ಬಸವ, ಮಹಾದೇವಿಯಕ್ಕ, ಇವರೇ ಮೊದಲಾದವರ ಹಲವು ವಚನಗಳೂ ಇವೆ. ಗ್ರಂಥಾದಿಯಲ್ಲಾರೋ ಬರೆದು ಸೇರಿಸಿದೊಂದು ಪ್ರಶಸ್ತಿ ವಾಕ್ಯವಿದೆ. ಗ್ರಂಥಾವತಾರದಲ್ಲಿ ಗುರು ಗುಹೇಶ್ವರ ಲಿಂಗ (ಅಲ್ಲಮ) ಸಂಗನ (ಬಸವ) ಚೆನ್ನಸಂಗನ ಬಸವ (ಚೆನ್ನಬಸವಣ್ಣ), ಸಿದ್ಧರಾಮ, ಮಹಾದೇವಿಯಕ್ಕ, ಮಡಿವಾಳ ಮಾಚಯ್ಯಾದ್ಯರ ಸ್ತುತಿಯಿದೆ. ಈ ಗ್ರಂಥದಲ್ಲಿ ಪ್ರತಿಪಾದಿಸಲ್ಪಟ್ಟ ವಿಷಯವು –

"ಅಲ್ಲಮಪ್ರಭು ಸಂಪ್ರದಾಯದ ।
ಸಲ್ಲಲಿತ ಸನ್ಮಾರ್ಗವನು ನಾ
ವೆಲ್ಲರರಿವಂದದಲಿ ಪೇಳುವೆನುಚಿತ ವಚನದಲ್ಲಿ॥

ಈ ಪದ್ಯಾರ್ಥದಿಂದ ಕ್ರೋಢೀಕರಿಸಲ್ಪಟ್ಟಿದೆ. ಈ ಕೃತಿಯು ಮರಳು ಶಂಕರದೇವ, ಸಿದ್ಧರಾಮ ಗೊಗ್ಗಯ್ಯ, ಮಡಿವಾಳ ಮಾಚಯ್ಯ, ಕಿನ್ನರ ಬೊಮ್ಮಣ್ಣಾದಿಗಳು, ಪ್ರಭುದೇವರ ಸಮಕಾಲೀನರೆಂದು ಹೇಳುವುದರಿಂದ ಅವರ ಕಾಲನಿರ್ಣಯವನ್ನು ಮಾಡಲು ಬಹಳ ಅನುಕೂಲಿಸುತ್ತದೆ. ಈ ಗ್ರಂಥದಿಂದ ಕರ್ತೃವಿನ ವಿಷಯವಾಗಿ ಯಾವಂಶವೂ ತಿಳಿದುಬರುವುದಿಲ್ಲ. ಆದರೆ ೪೯೧ ನಂಬರಿನ ಪುಸ್ತಕದಲ್ಲಿ ಮಾತ್ರವಿರುವ

ಕಂದ॥
ಶ್ರೀಗುರು ಗುಹೇಶ ಶರಣಂ।
ರಾಗದ್ವೇಷಾದಿ ವಿರಹಿತಾಂತಃ ಕರಣಂ ॥
ಯೋಗಮತಕಾರಣಂ ನಿಖಿ ।
ಲಾಗಮನಿಪುಣಂ ಸನಾಮಸೀಮಾಚಾಮಂ ॥

ಎಂಬೀ ಪದ್ಯದಿಂದ ಚಾಮ ಅಥವಾ ಚಾಮರಸನು ಇದರ ಕರ್ತೃವೆಂದು ತಿಳಿದುಬರುವುದು. ಈತನ ಕಾಲವು ಸುಮಾರು ಕಿರ.ಶ. ೧೪೩೦ ಎಂದು ಕವಿಚರಿತೆಯಲ್ಲಿ ಹೇಳಿದೆ.

ಹೀಗೆ ಪ್ರಕಟಿತ ಹಸ್ತಪ್ರತಿ ಸೂಚಿಗಳನ್ನು ಅಧ್ಯಯನ ಮಾಡುವುದರಿಂದ ಸಾಕಷ್ಟು ಹೊಸ ವಿಷಯಗಳು ಲಭ್ಯವಾಗುತ್ತದೆ. ಯುವ ವಿದ್ವಾಂಸರು ಆ ನಿಟ್ಟಿನಲ್ಲಿ ಹೆಚ್ಚಿನ ಪರಿಶ್ರಮ ಮಾಡಬೇಕು. ■

ಅಡವಿ ಅರಣ್ಯದಲಿ ಮಡಿವನಕ ತಪವಿದ್ದು
ಮಡಿದಾಗ ಮೃಡನ ಮರೆದಡೆ
ತುಂಬಿದ ಸಕ್ಕರೆಯ ಮಡುವಿನೊಳಗೊಕ್ಕಂತೆ ರಾಮನಾಥ.

**ಜೇಡರ ದಾಸಿಮಯ್ಯ**



## ಮಹಾಮನೆ ಪದಬಂಧ – ೩೧ರ ಸರಿಯುತ್ತರ

**ವಿದ್ಯಾ ಹಾಲಭಾವಿ**

| | | | | | | | | |
|---|---|---|---|---|---|---|---|---|
| ಕ | ಲ | ಭ | | | | ಡೋ | | |
| ಲಿ | | ವ | ನ | ದಾ | | ಹ | ವ | ನ |
| ಯು | | | | ಸೋ | ದ | ರ | | ವೀ |
| ಗ | | ಆ | | ಹ | | ಕ | | ನ |
| | ಬೊ | ಕ್ಕ | ಸ | ದ | ಚಿ | ಕ್ಕ | ಣ್ಣ | |
| ಶ್ರೀ | | ಮ | | ಸಂ | | ಯ್ಯ | | ರಿ |
| ಶೈ | | ಹಾ | ದಿ | ಗ | | | | ಭಾ |
| ಲ | ಗು | ದೇ | | ಣ್ಣ | ಪ್ಪ | ಅ | | ಯ |
| | | ವಿ | | | | ಣ್ಣ | ಮ | ರಾ |

ಮಹಾಮನೆಯ ಹಲವಾರು ಓದುಗರು ಮಹಾಮನೆ ಪದಬಂಧ ನಂ. ೩೧ರ ಉತ್ತರಗಳನ್ನು ಕಳಿಸಿದ್ದಾರೆ. ಅವುಗಳಲ್ಲಿ ಇಬ್ಬರು ಸರಿಯಾದ ಉತ್ತರ ಕೊಟ್ಟಿರುತ್ತಾರೆ. ಅವರಿಗೆ ಬಹುಮಾನವನ್ನು ಕೊಡಲಾಗಿದೆ.

೧. **ಶ್ರೀ ಜಿ.ಸಿ. ಹರ್ಷ, ಬೆಂಗಳೂರು**

೨. **ಶ್ರೀ ಮಹಾದೇವ ಟೆಂಗಿನಕಾಯಿ, ಬೆಂಗಳೂರು**

ಬಹುಮಾನ ವಿಜೇತರಿಗೆ ಮಹಾಮನೆಯ ಅಭಿನಂದನೆಗಳು.

ವಿಜೇತರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಅವರ ವಿಳಾಸಕ್ಕೆ ಕಳಿಸಲಾಗಿದೆ.



## ಮಹಾಮನೆ ಪದಬಂಧ – ೩೨

**ವಿದ್ಯಾ ಹಾಲಭಾವಿ**

| | | | | | | | | |
|---|---|---|---|---|---|---|---|---|
| ೧ | | ೨ | | | | ೩ | | ೪ |
| | | | | ೫ | | ೬ | ೭ | |
| | ೮ | | | | | | | |
| | | | | | | | ೯ | |
| | ೧೦ | | | | | | | |
| ೧೧ | | | | | | | | |
| | | | | ೧೨ | | ೧೩ | | |
| ೧೪ | | ೧೫ | | | | | | ೧೬ |
| | | | | | | ೧೭ | | |

### ಎಡದಿಂದ ಬಲಕ್ಕೆ

೧. ರಂಗನಿಗೆ ಕಾಣುತ್ತಿರುವ ಅಲೆ(೩)
೬. ದನವಿರುವ ಮನೆ(೩)
೮. ನಡೆ ನುಡಿಗಳಲ್ಲಿ ಉಂಟಾಗುವ ತೊಡರು(೪)
೯. ಮನ್ಮಥನ ಪತ್ನಿ(೨)
೧೦. 'ಚನ್ನರಾಮೇಶ್ವರ' ವಚನಾಂಕಿತವುಳ್ಳ ಈ ಶರಣನ ಮನೆದೈವ ಆಲಂದೆಯ ಸೋಮನಾಥೇಶ್ವರ(೭)
೧೧. ಉತ್ತರದವರ ಬಾಯಲ್ಲಿಚಿಕ್ಕಪ್ಪ!(೨)
೧೨. ರಾಜ,ಕುದುರೆ,ಕಾಲಾಳು ಮುಂತಾದ ಕಾಯಿಗಳಿಂದ ಆಡುವ ಒಳಾಂಗಣದ ಆಟ(೪)
೧೪. ಆರು ಋತುಗಳಲ್ಲಿ ಬಂದಿರುವ ಚಳಿಗಾಲ(೩)
೧೭. ಲೀಲಾಜಾಲವಾಗಿ ನಡೆದ ಹರಾಜು(೩)

### ಮೇಲಿಂದ ಕೆಳಕ್ಕೆ

೧. ಕಿರಿಯ ಸಹೋದರನಿಲ್ಲಿದ್ದಾನೆ(೨)
೨. ವಿಷ್ಣುವಿನ ವಾಹನ(೩)
೩. ನೆನಪಿನಿಂದ ಮಾಸದ ತಿಂಗಳು!(೨)
೪. ಜವಾನನ ಸುತ್ತ ನೆರೆದ ಮಂದಿ!(೨)
೫. ಆಂಧ್ರಪ್ರದೇಶದ ಪೆನ್ನಾಗರದ ಈ ಶರಣನು ಹಡಪದ ಕಾಯಕ ಮಾಡುತ್ತಿದ್ದನು(೭)
೭. ಶರಣರಲ್ಲಿ ಅಹಿಂಸಾಮೂರ್ತಿ ಎಂಬ ಕೀರ್ತಿಗೆ ಭಾಜನನಾದ ಈ ಶರಣನ ಪತ್ನಿ ವೀರಮ್ಮ(೪)
೧೦. ಚಾಂದ್ರಮಾನದ ಹನ್ನೊಂದನೆಯ ತಿಥಿ(೪)
೧೩. ರಂಗನ್ನು ತುಂಬಿರುವ ಹಸೆ(೩)
೧೪. ಭೂಶಿರದಲ್ಲಿರುವ ತಲೆ ಕಾಣುತ್ತಿದೆಯೇ?(೨)
೧೫. ತೇರು ಇಲ್ಲಿದೆ(೨)
೧೬. ಮಾವು ಇರುವ ಹತ್ತಿರವೇ ಕಾಣುತ್ತಿರುವ ಕಹಿಯಾದ

### ಮಹಾಮನೆ ಪದಬಂಧ–೩೨ರ ಸರಿಯುತ್ತರ ಮುಂದಿನ ಸಂಚಿಕೆಯಲ್ಲಿ

ಮಹಾಮನೆ ಪದಬಂಧವನ್ನು ಸರಿಯಾಗಿ ತುಂಬಿ ಕಳಿಸುವ ಸ್ಪರ್ಧಿಗಳಲ್ಲಿ ಲಾಟರಿ ಎತ್ತುವ ಮೂಲಕ ಇಬ್ಬರಿಗೆ ಪುಸ್ತಕ ರೂಪದ ಬಹುಮಾನವನ್ನು ಕಳಿಸಿಕೊಡಲಾಗುವುದು. ನಿಮ್ಮ ಉತ್ತರ ತಲುಪಲು ಕೊನೆಯ ದಿನಾಂಕ ೨೦.೦೧.೨೦೨೦. ವಿಳಾಸ: **ಸಂಪಾದಕರು, "ಮಹಾಮನೆ", ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೪ನೆಯ ವಿಭಾಗ, ಜಯನಗರ, ಬೆಂಗಳೂರು– ೫೬೦ ೦೭೦.** ಇಮೇಲ್ ವಿಳಾಸ: mahamanemagzine@gmail.com. ಕಳಿಸುವವರ ವಿಳಾಸ ಮತ್ತು ದೂರವಾಣಿ ಸಂಖ್ಯೆ:

# ಕನಕಪುರ ತಾಲ್ಲೂಕಿನಲ್ಲಿರುವ ಅವ್ವೆಯರಹಳ್ಳಿ ಶಾಸನ ಯಾರದು?

ಶ್ರೀ ಚಂದ್ರಶೇಖರ ಕಗ್ಗಲ್ಲುಗೌಡ್ರು

ಮಹಾತ್ಮರ ದೇಹ ಬಯಲಾದರೂ ಅವರಲ್ಲಿದ್ದ ಚೈತನ್ಯ ಯಾವುದಾರೂ ರೂಪದಲ್ಲಿ ಪ್ರಕಟಗೊಂಡು ಇತಿಹಾಸವನ್ನು ನೆನಪಿಸುತ್ತಿರುತ್ತದೆ. ಇಂತಹ ಮಹಾನ್ ಚೈತನ್ಯ ವಿಶ್ವಬಂಧು ಮರುಳಸಿದ್ಧರದು. ಮರುಳಸಿದ್ಧರ ಇತಿಹಾಸದ ಮೇಲೆ ಬೆಳಕು ಚೆಲ್ಲಲು ಇದು ಸಕಾಲ. ಈ ಸಂಕ್ರಮಣ ಕಾಲದಲ್ಲಿ ಅವರ ಚರಿತ್ರೆಯನ್ನು ಮರು ಅಧ್ಯಯನ ಮಾಡುವುದೇ ಈ ಲೇಖನದ ಉದ್ದೇಶ.

ಕನಕಪುರ ತಾಲೂಕಿನ ಅವ್ವೆಯರಹಳ್ಳಿಯ ಭೀಮೇಶ್ವರ ದೇವಾಲಯದ ಹಿಂಭಾಗದಲ್ಲಿ ಒಂದು ಶಾಸನವಿದೆ. ಆ ಶಾಸನದ ಪಠ್ಯ ಈ ಕೆಳಗಿನಂತೆ ಇದೆ.

೦೧. ಆನಂದ ಸಂವಚರದ ಆಗೋರತ್ರೆಗೆ

೦೨. ಹಜರ ಗವಿ ಬಗಿಲ ತೆಗೆದು ಮುಲೋ

೦೩. ಕ ಅರವಹಿ ಪವಡವ ತೋರಿದರು.

೦೪. ರೇವಣಸಿದ್ಧೇಶ್ವರನ ಮಗ

೦೫. ಮರುಳಸಿದ್ಧೇಶ್ವರನು?????....

ಆನಂದ ಸಂವತ್ಸರದಲ್ಲಿ ಬರೆದ ಈ ಶಾಸನದ ಕಾಲ ಕ್ರಿ.ಶ. ೧೧೯೩ ಎಂದು ವಿದ್ವಾಂಸರ ಊಹೆ. ಆದರೆ ಡಾ.ಎಂ.ಎಂ. ಕಲಬುರಗಿಯವರು "ಶಾಸನಗಳಲ್ಲಿ ಶಿವಶರಣರು" ಎಂಬ ತಮ್ಮ ಕೃತಿಯಲ್ಲಿ ಈ ಶಾಸನವನ್ನು ರೇವಣಸಿದ್ಧರ ಹೆಸರಿಗೆ ಸೇರಿಸಿರುವುದು ಆಶ್ಚರ್ಯವನ್ನುಂಟು ಮಾಡಿದೆ. ರೇವಣಸಿದ್ಧೇಶ್ವರನ ಮಗ ಮರುಳಸಿದ್ಧೇಶ್ವರನು ಪವಾಡವ ತೋರಿದರು ಎನ್ನುವಾಗ ಶಾಸನ ಮರುಳಸಿದ್ಧರದು ಆಗುತ್ತದೆಯೇ ಹೊರತು ರೇವಣಸಿದ್ಧರದು ಅಲ್ಲ. ಈ ವಿಚಾರ ಕಲಬುರಗಿಯವರಿಗೆ ಹೊಳೆಯಲಿಲ್ಲವೆಂಬುದು ಆಶ್ಚರ್ಯ. ಉತ್ತರಿಸಲು ಅವರಿಲ್ಲ ಎಂಬ ನೋವು ಸದಾ ಕಾಡುತ್ತಿರುತ್ತದೆ.

ಈ ಶಾಸನದ ಮೂಲಕ ಮರುಳಸಿದ್ಧರ ಗುರು ರೇವಣಸಿದ್ಧರೇ ಎಂಬುದು ಸಾಬೀತಾಯಿತು. ಮರುಳಸಿದ್ಧರು ಕೂಡ ತಮ್ಮ ಗುರುವಿನಂತೆ ವಚನಗಳನ್ನು ಬರೆದಿದ್ದು ಒಂದು ವಚನ ಮಾತ್ರ ಲಭ್ಯವಿದೆ. ಅದನ್ನು ಮೊದಲು ಪ್ರಕಟಿಸಿದವರು ಡಿ.ಎಲ್. ನರಸಿಂಹಚಾರ್.

ಮರುಳಸಿದ್ಧರ ವಚನ. (ಸಂಖ್ಯೆ೧೧೨೨.)

**ಆಲಿ ಆಲಯದಲ್ಲಿ ಕರಿಗೊಳ್ಳಲು,**
**ಆಲಿಸುವ ಶ್ರವಣವು ಮೇಲಿಪ್ಪ ಆಕಾಶವನಡರಲು,**
**ಉಲುಹು ನಿರ್ಭೂತಚಿತ್ತ ಸಮಾಧಾನವನೆಯ್ದಲು**
**ಕಾಲಕರ್ಮಭವಂಗಳ ಗೆಲುವುದಿದೇನು ಸೋಜಿಗವು ಹೇಳಾ,**
**ರೇವಣ್ಣಪ್ರಭುವೆ.**

ಮರುಳಸಿದ್ಧರ ಈ ಮೇಲಿನ ವಚನ ಅಲ್ಲಮ ಪ್ರಭುವಿನ ವಚನದ ಸ್ವರೂಪವನ್ನು



ಹೋಲುತ್ತದೆ. ಬಸವಯುಗದ ವಚನ ಮಹಾಸಂಪುಟ-೦೧ ರಲ್ಲಿ "ಆದಯ್ಯ, ಸಿದ್ಧರಾಮಯ್ಯ ಸ್ತುತಿಸಿದ ಮರುಳಸಿದ್ಧೇಶ್ವರದೇವ ಹಿರಿಯ ವಚನಕಾರ. "ರೇವಣ್ಣಪ್ರಭುವೆ" ಅಂಕಿತದಲ್ಲಿ ಇವನು ವಚನ ರಚಿಸಿದ್ದಾನೆ. ಸಿದ್ಧರಾಮಯ್ಯನು ಮರುಳಸಿದ್ಧನ ವಚನ ಅರವೆಂಟು ಸಾಸಿರವೆಂದು ಈತನ ವಚನ ಸಂಖ್ಯೆಯ ಪ್ರಮಾಣವನ್ನು ಸೂಚಿಸುತ್ತಾನೆ. ರೇವಣಸಿದ್ಧೇಶ್ವರರಿಂದ ದೀಕ್ಷೆ ಪಡೆದ ಈತನು, ಗುರುವಿನ ಹೆಸರನ್ನೆ ತನ್ನ ವಚನದ ಅಂಕಿತವನ್ನಾಗಿ ಇಟ್ಟುಕೊಂಡಿದ್ದಾನೆ. ಭಕ್ತಿಪ್ರಾಧಾನ್ಯವನ್ನು ಮನ್ನಿಸಿದ ಮರುಳಸಿದ್ಧೇಶ್ವರನು ಕುಟಿಲಸಿದ್ಧಿ, ಜಾತೀಯತೆ, ಯಜ್ಞಯಾಗ ಮೊದಲಾದ ಸಾಮಾಜಿಕ ,ಧಾರ್ಮಿಕ ಕರ್ಮಗಳ ವಿರುದ್ಧ ಹೋರಾಡಿದನು. ಕಾಲ, ಕರ್ಮ, ಭವಗಳನ್ನು ಗೆಲ್ಲುವುದು ಶರಣನ ಸಹಜ ಉದ್ದೇಶವಾಗಿರಬೇಕೆಂದು ತನ್ನ ವಚನದಲ್ಲಿ ವಿವರಿಸಿದ್ದಾನೆ" ಎಂದು ಉಲ್ಲೇಖಿಸಿದ್ದಾರೆ.

"ಮೈಸೂರು ಸ್ಟೇಟ್ ಗೆಜೆಟಿಯರ್‌ನ ಪುಟ ಸಂಖ್ಯೆ ೫೭೪ ರಲ್ಲಿ ತುಮಕೂರು ಜಿಲ್ಲೆ ಚಿಕ್ಕನಾಯಕನಹಳ್ಳಿ ತಾಲೂಕಿನ ದಬ್ಬೆಘಟ್ಟ ಗ್ರಾಮದಲ್ಲಿ ಮರುಳಸಿದ್ಧರಿಗೆ ಸಂಬಂಧಿಸಿದ ಸ್ಮಾರಕದ ಬಗ್ಗೆ ಉಲ್ಲೇಖವಿದೆ. ದಬ್ಬೆಘಟ್ಟ ಗ್ರಾಮದಲ್ಲಿ ೧೫ನೇ ಶತಮಾನಕ್ಕೆ ಸೇರಿದ ಮಹಾಲಿಂಗೇಶ್ವರ ದೇವಾಲಯವಿದ್ದು ಮೂರು ಕೋಣೆಗಳಲ್ಲಿ ಲಿಂಗಗಳನ್ನು ಕಾಣಬಹುದು. ಒಂದರಲ್ಲಿ ೨ ಶಿಲಾಶಾಸನಗಳಿವೆ. ಆ ಲಿಂಗಗಳಿಗೆ ಹೊಯ್ಸಳೇಶ್ವರ, ಬ್ರಹ್ಮೇಶ್ವರ ಮತ್ತು ಮಾಚೇಶ್ವರ ಎಂದು ಕರೆಯುತ್ತಾರೆ. ಮರುಳಸಿದ್ಧೇಶ್ವರ ದೇವಸ್ಥಾನದ ಗೋಡೆಯ ಮೇಲೆ ಒಂದೂವರೆ ಅಡಿ ಎತ್ತರದ ನಿಲುವಂಗಿ ಧರಿಸಿರುವ ಎರಡು ಪುರುಷರ ಕೆತ್ತಿದ ವಿಗ್ರಹಗಳಿವೆ. ಆ ವಿಗ್ರಹಗಳ ಮಧ್ಯೆದಲ್ಲಿ ಒಂದು ತಲೆಯನ್ನು ಕೆತ್ತಲಾಗಿದೆ. ಎಡಗಡೆಯ ಚಿತ್ರ ಮರುಳಸಿದ್ಧ, ಅದರ ಬಲಗಡೆ ರೇವಣಸಿದ್ಧ ಮತ್ತು ಮಧ್ಯದಲ್ಲಿರುವ ತಲೆ ಅಲ್ಲಮಪ್ರಭುವನ್ನು ಪ್ರತಿನಿಧಿಸುತ್ತದೆ. ಇವರೆಲ್ಲರು ಲಿಂಗಾಯತರ ಗುರುಗಳು." ಶಿವಶರಣರ ವಚನಗಳಲ್ಲಿ ಮರುಳಸಿದ್ಧರ ಕುರಿತಂತೆ ಉಲ್ಲೇಖಿಸಿರುವುದನ್ನು ನಾವು ಈ ಕೆಳಗಿನಂತೆ ನೋಡಬಹುದು.

ಆದಯ್ಯನ ವಚನ (ಸಂಖ್ಯೆ೧೦೩೦)

**ಬಸವಣ್ಣನ ಭಕ್ತಿಸ್ಥಲ, ಮಡಿವಾಳ ಮಾಚಿದೇವನ ಮಾಹೇಶ್ವರಸ್ಥಲ**
**ಘಟ್ಟಿವಾಳ ಮುದ್ದಣ್ಣನ ಪ್ರಸಾದಿಸ್ಥಳ, ಚನ್ನಬಸವಣ್ಣನ ಪ್ರಾಣಲಿಂಗಿಸ್ಥಲ.**
**ಪ್ರಭುವಿನ ಶರಣಸ್ಥಲ, ಸೊಡ್ಡಳ ಬಾಚರಸರ ಐಕ್ಯಸ್ಥಲ**
**ಅಜಗಣ್ಣನ ಆರೂಥ, ನಿಜಗುಣನಬೆರಗು,**
**ಅನಿಮಿಷನ ನಿಶ್ಚಲ, ಮಹದೇವಿಯಕ್ಕನ ಜ್ಞಾನ**
**ನಿಂಬಿಯಕ್ಕನ ನಿಶ್ಚಯ, ಮುಕ್ತಾಯಕ್ಕನ ಅಕ್ಕರು**
**ಸತ್ಯಕ್ಕನ ಯುಕ್ತಿ, ಅಲ್ಲಾಳಿಯಕ್ಕನ ಸಮತೆ,**
**ರೇವಣಸಿದ್ಧಯ್ಯದೇವರ ನಿಷ್ಠೆ, ಸಿದ್ಧರಾಮತಂದೆಗಳ ಮಹಿಮೆ**
**ಮರುಳಸಿದ್ಧಯ್ಯದೇವರ ಅದೃಷ್ಟ ಪ್ರಸಾದನಿಷ್ಠೆ.**
**ಏಕೋರಾಮಯ್ಯಗಳ ಆಚಾರನಿಷ್ಠೆ, ಪಂಡಿತಾರಾಧ್ಯರ ಸ್ವಯಂಪಾಕ**
**ಮುಗ್ಧಸಂಗಯ್ಯ, ಮೈದುನ ರಾಮಣ್ಣ, ಬೇಡರ ಕಣ್ಣಪ್ಪ,**
**ಕೋಳೂರ ಕೊಡಗೂಸು, ತಿರುನೀಲಕ್ಕರು,**
**ರುದ್ರಪಶುಪತಿಗಳು, ದೀಪದ ಕಲಿಯಾರ ಮುಗ್ಧಭಕ್ತಿ**
**ನಿಮ್ಮೊಳಗೆಂದಪ್ಪದೊ ಸೌರಾಷ್ಟ್ರ ಸೋಮೇಶ್ವರಾ.**

ವಚನ ಸಂಖ್ಯೆ.೧೦೩೧.

ಬಸವಣ್ಣನೆನ್ನ ಅಂಗ, ಮಡಿವಾಳನೆನ್ನ ಮನ,
ಪ್ರಭುವೆನ್ನ ಪ್ರಾಣ, ಚನ್ನಬಸವನೆನ್ನ ಕರಸ್ಥಲದ ಲಿಂಗ
ಘಟ್ಟಿವಾಳನೆನ್ನ ಭಾವ, ಸೊಡ್ಡಳಬಾಚರಸರೆನ್ನ ಅರಿವು,
ಮಹಾದೇವಿಯಕ್ಕನೆನ್ನ ಜ್ಞಾನ, ಮುಕ್ತಾಯಕ್ಕನೆನ್ನ ಅಕ್ಕರು,
ಸತ್ಯಕ್ಕನೆನ್ನ ಯುಕ್ತಿ, ನಿಂಬಿಯಕ್ಕನೆನ್ನ ನಿಶ್ಚಯ,
ಅಲ್ಲಾಳಿಯಕ್ಕನೆನ್ನ ಸಮತೆ, ಅನಿಮಿಷನೆನ್ನ ನಿಶ್ಚಲ,
ನಿಜಗುಣನೆನ್ನ ಕ್ಷಮೆ, ರೇವಣಸಿದ್ಧಯ್ಯದೇವರೆನ್ನ ನೇತ್ರ
ಸಿದ್ಧರಾಮಯ್ಯತಂದೆಗಳೆನ್ನ ನೇತ್ರದ ದೃಕ್ಕು,
ಮರುಳಸಿದ್ಧಯ್ಯದೇವರೆನ್ನ ಶ್ರೋತೃ,
ಪಂಡಿತಾರಾಧ್ಯರೆನ್ನ ಜಿಹ್ವೆ, ಏಕೋರಾಮಯ್ಯಗಳೆನ್ನ ನಾಸಿಕ
ಅಸಂಖ್ಯಾತರೆನ್ನ ಅವಯವಂಗಳು, ಪುರಾತರೆನ್ನ ಪುಣ್ಯದ ಪುಂಜ
ಏಳುನೂರೆಪ್ಪತ್ತು ಅಮರಗಣಂಗಳೆನ್ನ ಗತಿಮತಿ ಚೈತನ್ಯ
ಸೌರಾಷ್ಟ್ರ ಸೋಮೇಶ್ವರಾ, ಆ ನಿಮ್ಮ ಶರಣರ ಪಡಿದೊತ್ತಯ್ಯಾ.

ಹಾವಿನ ಹಾಳ ಕಲ್ಲಯ್ಯನ ವಚನ (ಸಂಖ್ಯೆ೧೧೨೫).

ಎನ್ನ ಕಕ್ಷೆಯಲ್ಲಿ ಸ್ವಾಯತವಾದನಯ್ಯಾ ಶಂಕರದಾಸಿಮಯ್ಯನು.
ಎನ್ನ ಕಕ್ಷೆಯಲ್ಲಿ ಸ್ವಾಯತವಾದನಯ್ಯಾಶಂಕರ ದಾಸಿಮಯ್ಯನು
ಎನ್ನ ಕರಸ್ಥಲದಲ್ಲಿ ಸ್ವಾಯತವಾದನಯ್ಯಾ ಉರಿಲಿಂಗಪೆದ್ದಯ್ಯನು
ಎನ್ನ ಉರಸಜ್ಜೆಯಲ್ಲಿ ಸ್ವಾಯತವಾದನಯ್ಯಾ ಘಟ್ಟಿವಾಳ ಮುದ್ದಯ್ಯನು
ಎನ್ನ ಅಮಳೋಕ್ಯದಲ್ಲಿ ಸ್ವಾಯತವಾದನಯ್ಯಾ ಅಜಗಣ್ಣಯ್ಯನು
ಎನ್ನಮುಖಸಜ್ಜೆಯಲ್ಲಿ ಸ್ವಾಯತವಾದನಯ್ಯಾ ನಿಜಗುಣದೇವರು
ಎನ್ನ ಶಿಖೆಯಲ್ಲಿ ಸ್ವಾಯತವಾದನಯ್ಯಾ ಅನಿಮಿಷದೇವರು
ಎನ್ನ ಘ್ರಾಣದಲ್ಲಿ ಸ್ವಾಯತವಾದನಯ್ಯಾ ಏಕೋರಾಮಿತಂದೆಗಳು
ಎನ್ನ ಜಿಹ್ವೆಯಲ್ಲಿ ಸ್ವಾಯತವಾದನಯ್ಯಾ ಪಂಡಿತಾರಾಧ್ಯರು
ಎನ್ನ ನೇತ್ರದಲ್ಲಿ ಸ್ವಾಯತವಾದನಯ್ಯಾ ರೇವಣಸಿದ್ಧೇಶ್ವರ ದೇವರು
ಎನ್ನ ತ್ವಕ್ಕಿನಲ್ಲಿ ಸ್ವಾಯತವಾದನಯ್ಯಾ ಸಿದ್ಧರಾಮೇಶ್ವರ ದೇವರು
ಎನ್ನ ಶ್ರೋತ್ರದಲ್ಲಿ ಸ್ವಾಯತವಾದನಯ್ಯಾ ಮರುಳಸಿದ್ಧೇಶ್ವರದೇವರು
ಎನ್ನ ಹೃದಯದಲ್ಲಿ ಸ್ವಾಯತವಾದನಯ್ಯಾ ಪ್ರಭುದೇವರು
ಎನ್ನ ಭ್ರೂಮಧ್ಯದಲ್ಲಿ ಸ್ವಾಯತವಾದನಯ್ಯಾ ಚೆನ್ನಬಸವಣ್ಣನು
ಎನ್ನ ಬ್ರಹ್ಮರಂಧ್ರದಲ್ಲಿ ಸ್ವಾಯತವಾದನಯ್ಯಾ ಸಂಗನಬಸವಣ್ಣನು
ಎನ್ನ ಉತ್ತಮಾಂಗದಲ್ಲಿ ಸ್ವಾಯತವಾದನಯ್ಯಾ ಮಡಿವಾಳಯ್ಯನು
ಎನ್ನ ಲಲಾಟದಲ್ಲಿ ಸ್ವಾಯತವಾದನಯ್ಯಾ ಸೊಡ್ಡಳ ಬಾಚರಸನು
ಎನ್ನ ಪಶ್ಚಿಮದಲ್ಲಿ ಸ್ವಾಯತವಾದನಯ್ಯಾ ಹಡಪದಪ್ಪಣ್ಣನು
ಎನ್ನ ಕಂಠದಲ್ಲಿ ಸ್ವಾಯತವಾದನಯ್ಯಾ ಕಿನ್ನರ ಬ್ರಹ್ಮಯ್ಯನು



ಎನ್ನ ಸರ್ವಾಂಗದಲ್ಲಿ ಸ್ವಾಯತವಾದರಯ್ಯಾ ಗಣಂಗಳು.
ಮಹಾಲಿಂಗ ಕಲ್ಲೇಶ್ವರಾ, ನಿಮ್ಮ ಶರಣರ ಶ್ರೀಪಾದಕ್ಕೆ
ನಮೋ ನಮೋ ಎನುತಿರ್ದೆನು.

ಮೆರೆಮಿಂಡಯ್ಯನ ವಚನ (ಸಂಖ್ಯೆ ೧೩೦೭),

ಎನ್ನ ಘ್ರಾಣ ಶುದ್ಧವಾಯಿತ್ತಯ್ಯಾ
ಏಕೋರಾಮಿತಂದೆಗಳ ಧರ್ಮದಿಂದ.
ಎನ್ನ ಜಿಹ್ವೆ ಶುದ್ಧವಾಯಿತ್ತಯ್ಯಾ
ಪಂಡಿತಾರಾಧ್ಯರ ಧರ್ಮದಿಂದ.
ಎನ್ನ ನೇತ್ರ ಶುದ್ಧವಾಯಿತ್ತಯ್ಯಾ
ರೇವಣಸಿದ್ಧೇಶ್ವರ ಧರ್ಮದಿಂದ.
ಎನ್ನ ತ್ವಕ್ಕು ಶುದ್ಧವಾಯಿತ್ತಯ್ಯಾ
ಸಿದ್ಧರಾಮೇಶ್ವರ ದೇವರ ಧರ್ಮದಿಂದ.
ಎನ್ನ ಶ್ರೋತ್ರ ಶುದ್ಧವಾಯಿತ್ತಯ್ಯಾ.
ಮರುಳಸಿದ್ಧೇಶ್ವರ ಧರ್ಮದಿಂದ.
ಎನ್ನ ಹೃದಯ ಶುದ್ಧವಾಯಿತ್ತಯ್ಯಾ
ಸಕಳೇಶ ಮಾದಿರಾಜಯ್ಯಗಳ ಧರ್ಮದಿಂದ.
ಎನ್ನ ಅಂತರಂಗ ಶುದ್ಧವಾಯಿತ್ತಯ್ಯಾ
ತೆಲುಗು ಜೊಮ್ಮಯ್ಯಗಳ ಧರ್ಮದಿಂದ.
ಎನ್ನ ಬಹಿರಂಗ ಶುದ್ಧವಾಯಿತ್ತಯ್ಯಾ
ಕೇಶಿರಾಜಯ್ಯಗಳ ಧರ್ಮದಿಂದ.
ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯಾ.
ಬಸವಣ್ಣ, ಚನ್ನಬಸವಣ್ಣ, ಪ್ರಭು, ವೀರಮಡಿವಾಳಯ್ಯಗಳ ಧರ್ಮದಿಂದ.
ಐಘಟದೂರ ರಾಮೇಶ್ವರಾ, ನಿಮ್ಮ ಶರಣರ ಧರ್ಮದಿಂದ
ನಾನು ಶುದ್ಧನಾದೆನಯ್ಯಾ.

ಸಿದ್ಧರಾಮನ ವಚನ (ಸಂಖ್ಯೆ.೧೯೯೮)

ಮಡಿವಾಳಯ್ಯ ತನ್ನ ದೇಹವ ಕೊಟ್ಟು
ಗಣಚಾರದ ಶಕ್ತಿ ಪ್ರಸಾದವ ಪಡೆದ
ಘಟ್ಟಿವಾಳಯ್ಯ ತನ್ನ ಮಾಯೆಯ ಕೊಟ್ಟು
ಮೂಲಪ್ರಸಾದವ ಪಡೆದ
ಮರುಳಸಿದ್ಧಯ್ಯ ತನ್ನ ಮನವ ಕೊಟ್ಟು
ಗಣಪ್ರಸಾದವ ಪಡೆದ
ನಾನು ಕರಣಾದಿಗಳ ಕೊಟ್ಟು
ಚೆನ್ನಬಸವಣ್ಣನ ಪ್ರಸಾದವ ಪಡೆದು
ಭವರಹಿತನಾದೆ ನೋಡಾ, ಕಪಿಲಸಿದ್ಧಮಲ್ಲಿನಾಥಾ.

ವಚನ ಸಂಖ್ಯೆ ೧೫೮೮.

**ಅಲ್ಲಯ್ಯಗಳ ವಚನ ಎರಡೆಂಬತ್ತು ಕೋಟಿ**
**ಅಪ್ಪಯ್ಯಗಳ ವಚನ ನಾಲ್ಕು ಲಕ್ಷದ ಮೂವತ್ತಾರು ಸಾಸಿರ**
**ಎಮ್ಮಯ್ಯಗಳ ವಚನ ವಚನಕ್ಕೊಂದು**
**ನೀಲಮ್ಮನ ವಚನ ಲಕ್ಷದ ಹನ್ನೊಂದು ಸಾಸಿರ**
**ಗಂಗಾಂಬಿಕೆಯ ವಚನ ಲಕ್ಷದ ಎಂಟು ಸಾಸಿರ**
**ಎಮ್ಮಕ್ಕ ನಾಗಾಯಿಯ ವಚನ ಮೂರುಲಕ್ಷದ ತೊಂಬತ್ತಾರು ಸಾಸಿರ**
**ಮಡಿವಾಳಣ್ಣನ ವಚನ ಮೂರು ಕೋಟಿ ಮುನ್ನೂರು**
**ಹಡಪದಯ್ಯಗಳ ವಚನ ಹನ್ನೊಂದು ಸಾಸಿರ**
**ಮರುಳಸಿದ್ಧನ ವಚನ ಅರವತ್ತೆಂಟು ಸಾಸಿರ**
**ಇಂತಪ್ಪ ವಚನದ ರಚನೆಯ ಬಿಟ್ಟು**
**ಹುಡಿಮಣ್ಣ ಹೊಯ್ಯದೆ ಮಾಬನೆ**
**ಕುತ್ಸಿತ ಕಾವ್ಯಾಲಂಕಾರ ನೋಡುವರ ನೋಡಿ**
**ಮಹಾದೇವ ಕಪಿಲಸಿದ್ಧ ಮಲ್ಲಿಕಾರ್ಜುನಾ.**

ಸಿದ್ಧರಾಮ ಮರುಳಸಿದ್ಧನ ವಚನ ಅರವತ್ತೆಂಟು ಸಾಸಿರ ಎಂದು ಹೇಳುವಾಗ ಸ್ವಲ್ಪ ಪ್ರಕ್ಷಿಪ್ತತೆಗೆ ಒಳಗಾಗಿರುವ ಸಾಧ್ಯತೆಯಿದೆ. ಏಳನೂರ ಎಪ್ಪತ್ತು ಅಮರಗಣಂಗಳು ಸರಾಸರಿ ನೂರರಂತೆ ವಚನಗಳನ್ನು ಬರೆದಿದ್ದರೂ ಒಟ್ಟು ವಚನಗಳ ಸಂಖ್ಯೆ ೭೭,೦೦೦ ದಷ್ಟು ವಚನಗಳಾಗುತ್ತದೆ. ಹೀಗಿರುವಾಗ ಕೋಟಿ ವಚನ, ಲಕ್ಷ ವಚನ ಅಥವಾ ಒಬ್ಬನೆ ಹತ್ತಾರು ಸಾಸಿರ ವಚನ ಬರೆದಿದ್ದಾನೆ ಎಂದರೆ ಅದು ಉತ್ಪ್ರೇಕ್ಷೆ ಆಗುತ್ತದೆ. ಯಾವ ಯಾವ ಶರಣರ ವಚನಗಳು ಎಷ್ಟು ದೊರೆತ್ತಿದ್ದವೋ ಅಷ್ಟನ್ನು ಸೇರಿಸಿ ಓದಿಕೊಳ್ಳಬಹುದು.

ಅಲ್ಲಮಪ್ರಭುವಿನ ಒಂದು ವಚನ (ಸಂಖ್ಯೆ: ೧೫೯೩) ಓದುಗರಿಗೆ ಗೊಂದಲವನ್ನುಂಟು ಮಾಡುತ್ತಿದೆ. ಅಲ್ಲಮ ಹೇಳಿರುವ ಮಾತು ಮರುಳಸಿದ್ಧರಿಗೋ ಅಥವಾ ಸಿದ್ಧರಾಮರಿಗೋ ಎಂಬುದು ಸ್ಪಷ್ಟವಾಗಿಲ್ಲ. ಆ ವಚನ ಹೀಗಿದೆ.

ವಚನದ ಸಂಖ್ಯೆ: ೧೫೯೩

**ಭಕ್ತನಿರ್ದ ಠಾವಿಗೆ ಕರ್ತ ಬಂದಡೆ**
**ಅತ್ತಿತ್ತ ಹರಿಯದೆ ನಂಬಬೇಕು ನೋಡಾ**
**ಕರ್ತನ ಕಂಡು ಭೃತ್ಯ ಉರಿಯನುಗುಳಿದಡೆ**
**ಬಳಿಕ ಈ ಕರ್ತನ (ಭೃತ್ಯ) ಭಾವಕ್ಕೆ ಸಂಬಂಧವೇನು?**
**ತಪ್ಪಿ ತಪ್ಪಿ ತಿದ್ದಿಕೊಂಡೆಹೆನೆಂದಡೆ ಹಸನಾಗಬಲ್ಲುದೆ?**
**ಗುಹೇಶ್ವರನ ಶರಣನಾರೆಂಬುದನು ನೀನೆತ್ತ ಬಲ್ಲೆ? ಹೋಗಾ,**
**ಮರುಳ ಸಿದ್ಧರಾಮಯ್ಯಾ.**

ಮರುಳಸಿದ್ಧರಿಗೆ ಹೇಳಿದ್ದರೆ ರಾಮನನ್ನು ತೆಗೆದು ಹಾಕಬೇಕು. ಸಿದ್ಧರಾಮರಿಗೆ ಹೇಳಿದ್ದರೆ ಮರುಳ ಪದವನ್ನು ತೆಗೆದುಹಾಕುವುದು ಉಚಿತವೆನಿಸುವುದು.

ಮರುಳಸಿದ್ಧರಿಗೆ ಸಂಬಂಧಿಸಿದಂತೆ ಅನೇಕ ಸಾಹಿತ್ಯ ಕೃತಿಗಳು ಲಭ್ಯವಿವೆ. ಸಾವಿರಾರು ಸ್ಮಾರಕಗಳು ರಾಜ್ಯದ ಉದ್ದಗಲಕ್ಕೂ ಮೂಕ ಸಾಕ್ಷಿಯಾಗಿವೆ. ಆದರೆ ಸಮಕಾಲೀನ ಶಿಷ್ಯ



ಗದ್ದುಗೆಯ ರಾಮಿತಂದೆ ಬರೆದ "ಗುರು ಬೋಧೆಯ ಮಹಾತ್ಮೆ" ಉಪಲಬ್ಧವಿಲ್ಲ. ಗದ್ದುಗೆಯ ರಾಮಿ ತಂದೆಯಿಂದ ರಚಿಸಲ್ಪಟ್ಟ ಗುರುಬೋಧೆಯ ಮಹಾತ್ಮೆ ಎಂಬುದರ ಆಧಾರದಿಂದ ದೇವಕವಿ ಮರುಳಸಿದ್ಧ ಚರಿತೆಯನ್ನು ೧೫೮೭ ರಲ್ಲಿ ರಚಿಸಿದ್ದಾನೆ. ಆನೆಕೊಂಡದ ರೇವಣಸಿದ್ಧ ಕವಿಯ ಸಾಂಗತ್ಯ ಕ್ರಿ.ಶ.೧೮೪೭ ರಲ್ಲಿ, ಸಿರಿಗೆರೆಯ ಶ್ರೀ ಗುರುಸಿದ್ಧ ಸ್ವಾಮಿಗಳ ಸಾಂಗತ್ಯ ಕ್ರಿ.ಶ. ೧೮೭೪ ರಲ್ಲಿ ರಚಿತಗೊಂಡಿವೆ. ಡಾ.ಎಸ್.ವಿದ್ಯಾಶಂಕರ ಸಂಪಾದಿಸಿರುವ ಕೊಡೆಕಲ್ಲಿನ ಚಿಕ್ಕರಾಚಯ್ಯ ತನ್ನ ಮಹಾದೇವಿಯಕ್ಕನ ಸಾಂಗತ್ಯ ಕೃತಿಯಲ್ಲಿ ಮರುಳಸಿದ್ಧರೇ ಅಕ್ಕ ಮಹಾದೇವಿಯ ದೀಕ್ಷಾಗುರು ಎಂದು ಈ ಕೆಳಗಿನಂತೆ ದಾಖಲಿಸಿದ್ದಾರೆ.

**ಶ್ರೀ ಗುರು ಮರುಳಸಿದ್ದೇಶ್ವರ ಶಿವಯೋಗಿ**
**ಆಗಮದೀಕ್ಷಾಚಾರ್ಯ**
**ಆಗಳೆ ಓಂಕಾರಸೆಟ್ಟಿಯ ಗೃಹಕೆ ದೀ–**
**ಕ್ಷಾಗುರುವಾಗಿ ಚಿತ್ತೈಸೆ.**

ದೇವಕವಿಯ ಮರಳಸಿದ್ಧೇಶ ಚರಿತದಲ್ಲಿ ಉಕ್ತವಾಗಿರುವ ಚಾರಿತ್ರಕ ಪುರುಷರಾದ ನೊಣಬೇಶ, ಬಲ್ಲಾಳನೃಪ ಮತ್ತು ಗಣಪತಿ ಇವರ ಕಾಲವು ಚರಿತ್ರೆಯಲ್ಲಿ ಗೊತ್ತಾಗಿದೆ. ವಿಜಯಪಾಂಡ್ಯ ಅಥವಾ ಕಾಮರಸ ದೇವ (೧೧೪೮–೧೧೮೭) ನೊಣಬೇಶನೆಂದು ಹುಲ್ಲೂರು ಶ್ರೀನಿವಾಸ ಜೋಯಿಸರು ತರ್ಕಿಸಿದ್ದಾರೆ. ಹೊಯ್ಸಳರ ಇಮ್ಮಡಿ ವೀರ ಬಲ್ಲಾಳನೇ (೧೧೭೩–೧೨೨೦) ದೇವಕವಿ ಹೆಸರಿಸಿರುವ ಬಲ್ಲಾಳನೃಪ. ಕಾಕತೀಯರ ಗಣಪತಿ (೧೧೯೮–೧೨೬೧) ಅವಧಿಯಲ್ಲಿ ಅಧಿಕಾರ ನಡೆಸಿ ತನ್ನ ಮಗಳು ರುದ್ರಾಂಬಳಿಗೆ ಅಧಿಕಾರ ವಹಿಸಿಕೊಟ್ಟನೆಂದು ಇತಿಹಾಸ ಹೇಳುತ್ತದೆ.

ಮರುಳಸಿದ್ಧರ ಶಿಷ್ಯ ತೆಲುಗುಬಾಳು ಸಿದ್ಧ. "ರೇವಣಸಿದ್ಧ ಚರಿತೆ" ಎಂಬ ಕನ್ನಡ ಗದ್ಯಗ್ರಂಥದ ಆದಿಯಲ್ಲಿ ತೆಲುಗುಬಾಳುಸ್ವಾಮಿ ಎಂಬ ತರಳಬಾಳು ಸಿದ್ಧಲಿಂಗೇಶನ ವೃತ್ತಾಂತವಿದ್ದು ಅದು ಹೀಗಿದೆ.

**"ಶ್ರೀಗುರು ಮರುಳಸಿದ್ಧೇಶಾಯನಮ: ಶ್ರೀ ಉಜ್ಜನಿ ಸಿದ್ಧಲಿಂಗಾಯ ನಮ:"**
ರಾಗ; ತ್ರಾಹಿ ಹಿಮಕರ ಮೌಲಿ
**ತ್ರಾಹಿ ಕರುಣಾಪಾಂಗ**
**ತ್ರಾಹಿ ಶಿವ ತೆಲಗುಬಾಳಿನ**
**ಸಿದ್ಧರಾಯಾ ತ್ರಾಹಿ ತ್ರಾಹಿ** (ಪ)
**ಮತ್ಸ ಕೂರ್ಮನು ವರಹ ನರಸಿಂಹರೆಂದೆಂಬ**
**ಪಕ್ಷಿವಾಹನ ರಾಮ ವಾಸುದೇವನಣುಗಾ**
**ಈಕ್ಷಿಸಲು ಬಲಭದ್ರ ಬುದ್ಧ ಕಲ್ಯಾವರಿಂದ**
**ಈ ಕ್ಷಿತಿಯೋಳ್ ನುತಿವಡೆದೆ ನಿಗಮಕ್ಕಭೇಧ್ಯಾ** (ತ್ರಾಹಿ)
**ಪರಶು ಡೊಂಕಣಿ ವಜ್ರ ಹಲಗೆ ಗದೆಯು**
**ಕುಂತ ಹರುಷದಿಂ ಬತ್ತಿಸಾಯುಧ ಪಾಣಿಯು**
**ವರವೀರಗಣಪ ಷಣ್ಮುಖ ತಾತ ಚಿನ್ಮಯನೆ**
**ಹರ ಮಹಾದೇವ ಹೇಮಾದ್ರಿ ಕೋದಂಡ** (ತ್ರಾಹಿ)

ಕಲಧಾತ ಗೋತ್ರ ನಿಜಕಾತ್ಯಾಯಿನೀಸ್ತೋತ್ರ
ನೆಲೆ ಪಂಚವಕ್ತ್ರ ಪುರಾಣ ಪ್ರಸಿದ್ಧ
ಕಲಹಂಸಮಯ ರಕ್ಷ ದಕ್ಷ ಶಿಕ್ಷಾನಂದ
ತೆಲಗುಬಾಳ ಪ್ರಸಿದ್ಧಂ ಶುದ್ಧ ಸಿದ್ಧಾ (ತ್ರಾಹಿ)

ಶ್ರೀ ಚಪ್ಪನ್ನೈವತ್ತಾರು ದೇಶವನ್ನು ದೇಶಾಂತರವನು ಮಾಡಿದನು. ತೆಲುಗುಬಾಳು ಸ್ವಾಮಿ, ಅವು ಯಾವಯಾವ ದೇಶಗಳೆಂದರೆ: ಅಂಗವಂಗದೇಶ, ಕಳಿಂಗ ಕರ್ನಾಟಕ ದೇಶ, ಗೋಮುಖ ಗೋವಶ್ವಮುಖ ದೇಶ, ಗುಜ್ಜರ ದೇಶ, ಮಲೆಯಾಳ ದೇಶ, ನಾಯ್ಖುದನ ದೇಶ, ಕೊಂಕಣಿ ದೇಶ, ಕೊಡೆಯಾಲ ದೇಶ, ಇಂತೀ ಚಪ್ಪನ್ನೈವತ್ತಾರು ದೇಶವನ್ನು ದೇಶಾಂತರ ಮಾಡಿ ನಾಲ್ಕು ದೇಶಗಳಿಗೆ ಚಲಿಸುವಾಗ ಆಯುಧವಾವುದೆಂದರೆ; ಮುರುಡಿ, ಮುಸುಂಡಿವಾಳ, ಕೊಡಲಿ, ಕೊಂಕಣಗತ್ತಿ, ಚಾಕು, ಚಪ್ಪಗೊಡಲಿ, ಚಂದ್ರಾಯುಧ, ಪಿಡಿಯಚಕ್ರ, ಪಾಡಿವಾಳ, ಸಿಂಗಾಡಿ, ಸರಳಂಬು, ಸಾಣೆ, ಕೈಯ್ಯಂಬು, ಕಚ್ಚುದಂಡ, ಮಿಡಿದಂಡ, ಬತ್ತೀಸಾಯುಧಮಂ ಪಿಡಿದು ದೇಶಾಂತರವ ಮಾಡುವ ದೇಶಂಗಳಿಗೆ ಬರುದಿನ ಪ್ರತಾಪವು, ಇಂತು ತರಳಬಾಳು ಸಿದ್ಧೇಶ್ವರನ ಪ್ರತಾಪವಿಡಿದು

ಎಂದು ತರಳಬಾಳು ಸಿದ್ಧಲಿಂಗನ ಪಾದ
ಕೊಂದನೆೈದು ಈ ಕೃತಿ ಪದ್ಧತಿಯನು
ಕಂದಂಗೆ ದಯಗೊಡೆ ಕವಿತೆಯ ಪೇಳುವೆ
ಚಂದ್ರಶೇಖರ ಮರುಳಾನಂದ ಮಹಿಮೆಯನು

“ಈ ಗುರುಕುಲಾನ್ವಯದ ಮುಂದಿನ ಗುರುಗಳ ಬಗೆಗೆ ಹೆಚ್ಚು ಮಾಹಿತಿ ಸದ್ಯದಲ್ಲಿ ದೊರೆಯುವುದಿಲ್ಲ. ಅವರ ಹೆಸರುಗಳು ಮಾತ್ರ ಹಳೆಯ ದಾಖಲೆ (ಸುಮಾರು ಕ್ರಿ.ಶ. ೧೮೦೦)ಯೊಂದರಲ್ಲಿ ದೊರೆಯುತ್ತದೆ.

ತೆಲುಗುಬಾಳು ಸಿದ್ಧೇಶನು ತನ್ನ ಗುರುವಿನಂತೆ ವಚನಗಳನ್ನು ಬರೆದಿರಬಹುದು. ಮರುಳಸಿದ್ಧ ಎಂಬ ಅಂಕಿತವಿರುವ ಒಂದು ಅನುಭಾವ ಪೂರ್ಣವಾದ ಹಾಡು ಈ ದಿಸೆಯಲ್ಲಿ ಬೆಳಕು ಬೀರಬಲ್ಲದು. ಇದನ್ನು ವಚನ ಮಹಾ ಸಂಪುಟದಲ್ಲಿ ಸೇರಿಸಲು ಸಂಶೋಧಕರು ಪ್ರಯತ್ನಿಸಬೇಕು. ಅದರ ಪೂರ್ಣ ಪಾಠ ಇಂತಿದೆ.

ಶ್ರೀ ಅರುವೆ ಸಿಕ್ಕಿತು ನಿಜದರುವೆ
ಬಾಳಮರವೆಂದು ಕುಲವೆಲ್ಲ ಹರಿದುಹೋಗಲಿಕಾಗಿ (ಪ)

ಹಸಿರು ಹಳದಿ ಕೆಂಪು ಕರಿದಲ್ಲ ಅರುವೆ
ಒಸೆದು ನೋಡಲು ನೋಟದತ್ತತ್ತಲರುವೆ
ಕುಶಲತನಗಳಿಗಸಾಧ್ಯವೀಯರುವೆ
ಅಸಮ ಶ್ರೀ ಗುರುಕೃಪೆ ಪಡೆದವರರುವೆ (೧)

ಕೇಳಲು ನಾದವಿಲ್ಲದ ಬರಿಯರುವೆ
ಹೇಳಲು ಅನ್ಯೋನ್ಯ ಸುಖಮಯದರುವೆ
ವೇಳೆ ವೇಳೆಗೆ ಸಾಧಿಸುವದಲ್ಲದರುವೆ
ಭಾಳಲೋಚನ ರೂಪನಾದವರರುವೆ (೨)



ಚಾರು ಚತುರ್ವಿಧದೊಳಗಿಲ್ಲದರುವೆ
ಮೂರು ಲೋಕಂಗಳ ಮೀರಿದರುವೆ
ತೋರುವ ಚಿದ್ವ್ಯೋಮದೊಳು ತುಂಬಿದರುವೆ
ಮಾರಸಂಹರ ಮರುಳಸಿದ್ಧನೆಂದರುವೆ. (೩)

ತೆಲಗುಬಾಳು ಗ್ರಾಮವು ಮೊಟ್ಟಮೊದಲು ಬೆಳಕಿಗೆ ಬಂದುದು ದೇವಕವಿಯ ಸಿದ್ಧಲಿಂಗ ಚಾರಿತ್ರದಿಂದ. ಇದರ ಕಾಲ ಕ್ರಿ.ಶ.೧೫೮೭. ದೇವಕವಿಯ ಕಾಲದಲ್ಲಿ ಈ ತೆಲಗುಬಾಳು ಗ್ರಾಮವು ಜನವಸತಿಯಿಂದ ಕೂಡಿತ್ತೆಂದು ಇದರಿಂದ ತಿಳಿಯುತ್ತದೆ. ಚಿಲಕನಹಟ್ಟಿ ಗ್ರಾಮದ ಬಂಗಾರಪ್ಪ ಎಂಬುವವರ ವಶದಲ್ಲಿರುವ ಒಂದು ತಾಮ್ರ ಶಾಸನದಲ್ಲಿ, ಕ್ರಿ.ಶ. ೧೫೦೬ ರಲ್ಲಿ ತೆಲುಗುಬಾಳಿನಲ್ಲಿ ದ್ಯಾಮನಗೌಡರೆಂಬುವವರು ವಿಜಯನಗರ ರಾಜ್ಯದ ಬಡೇರಾಮರಾಯರ ಗೌರವಕ್ಕೆ ಪಾತ್ರರಾಗಿದ್ದರೆಂದು ಸೂಚಿತವಾಗುತ್ತದೆ. ಒಟ್ಟಿನಲ್ಲಿ ಕ್ರಿ.ಶ. ೧೫೮೭ರ ನಂತರ ಈ ಗ್ರಾಮವು ಬೇಚರಾಖ್ ಆಗಿರಬಹುದು. ಈಗಲೂ ಸರ್ಕಾರಿ ದಾಖಲೆಯಲ್ಲಿ “ಬೇಚರಾಖ್ ತೆಲುಗುಬಾಳು ಗ್ರಾಮ” ಎಂದೇ ಇದೆ. ಸುತ್ತಮುತ್ತಲ ಜಮೀನುಗಳೆಲ್ಲಾ ತೆಲುಗುಬಾಳು ಗ್ರಾಮದ ಲೆಕ್ಕದಲ್ಲಿಯೇ ಇವೆ. ಈಗ ಚಿಲಕನಹಟ್ಟಿ ಗ್ರಾಮದಲ್ಲಿ ತೆಲುಗುಬಾಳು ಸಿದ್ಧನ ಹಾಗೂ ದ್ಯಾಮನಗೌಡನ ವಂಶಸ್ಥರು ವಾಸಿಸುತ್ತಿದ್ದಾರೆ. ತೆಲುಗುಬಾಳು ಸಿದ್ಧನ ಸಮಾಧಿ ಸ್ಥಳವೂ ಸಹ ಮರುಳಸಿದ್ಧನ ದೇವಾಲಯದ ಎಡಭಾಗದಲ್ಲಿದೆ.

ಈ ಲೇಖನದಲ್ಲಿ ತೆಲುಗುಬಾಳು ಸಿದ್ಧನ ಕುರಿತು ಪ್ರಸ್ತಾಪಿಸಲು ಕಾರಣವಿದೆ. ಅದೇನೆಂದರೆ ವಚನಗಳಲ್ಲಿ ತೆಲುಗು ಜೊಮ್ಮಯ್ಯ ಹಾಗೂ ತೆಲುಗೇಶ ಮಸಣಯ್ಯನವರ ಬಗ್ಗೆ ಉಲ್ಲೇಖವಿದೆ. ಇದು ಅಧ್ಯಯನಕ್ಕೆ ಯೋಗ್ಯವಾಗಿರುವಂತಹದು. ಬಸವಣ್ಣನವರ ವಚನ ಒಂದರಲ್ಲಿ ತೆಲುಗು ಜೊಮ್ಮಯ್ಯನ ಕುರಿತು ಪ್ರಸ್ತಾಪಿಸಲಾಗಿದೆ.

ವಚನ ಸಂಖ್ಯೆ:೪೭೬.

ತೊತ್ತಿಂಗೆ ಬಲ್ಲಿಹನೊಲಿದೆಡೆ ಪದವಿಯ ಮಾಡದೆ ಮಾಬನೆ?
ಜೇಡರ ದಾಸಯ್ಯಂಗೊಲಿದಾತ ಮತ್ತೊಬ್ಬ ದೇವನೆ,ಅಯ್ಯಾ?
ಮಾದಾರ ಚೆನ್ನಯ್ಯಂಗೆ, ಡೋಹರ ಕಕ್ಕಯಂಗೆ ,
ತೆಲುಗು ಜೊಮ್ಮಯ್ಯಂಗೆ ಒಲಿದಾತ ಮತ್ತೊಬ್ಬ ದೇವನೆ, ಅಯ್ಯಾ?
ಎನ್ನ ಮನದ ಪಂಚೇಂದ್ರಿಯ (ಅವನತ್ತ)ಲಾದಡೆ
ತನ್ನತ್ತ ಮಾಡುವ ಕೂಡಲಸಂಗಮದೇವಯ್ಯ.

ಮೆರೆಮಿಂಡಯ್ಯ ಹಾಗೂ ಅಮುಗಿ ದೇವಯ್ಯ ಸಹ ತಮ್ಮ ವಚನಗಳಲ್ಲಿ ತೆಲುಗು ಜೊಮ್ಮಯ್ಯನನ್ನು ಸ್ಮರಿಸಿದ್ದಾರೆ.

ಮೆರೆಮಿಂಡಯ್ಯ ವಚನ ಸಂಖ್ಯೆ ೧೩೦೭.

ಎನ್ನ ಘ್ರಾಣ ಶುದ್ಧವಾಯಿತ್ತಯ್ಯಾ
ಏಕೋರಾಮಿತಂದೆಗಳ ಧರ್ಮದಿಂದ.
ಎನ್ನ ಜಿಹ್ವೆ ಶುದ್ಧವಾಯಿತ್ತಯ್ಯಾ
ಪಂಡಿತಾರಾಧ್ಯರ ಧರ್ಮದಿಂದ.
ಎನ್ನ ನೇತ್ರ ಶುದ್ಧವಾಯಿತ್ತಯ್ಯಾ

ರೇವಣಸಿದ್ಧೇಶ್ವರ ಧರ್ಮದಿಂದ.
ಎನ್ನ ತ್ವಕ್ಕು ಶುದ್ಧವಾಯಿತ್ತಯ್ಯಾ
ಸಿದ್ಧರಾಮೇಶ್ವರ ದೇವರ ಧರ್ಮದಿಂದ.
ಎನ್ನ ಶ್ರೋತ್ರ ಶುದ್ಧವಾಯಿತ್ತಯ್ಯಾ.
ಮರುಳಸಿದ್ಧೇಶ್ವರ ಧರ್ಮದಿಂದ.
ಎನ್ನ ಹೃದಯ ಶುದ್ಧವಾಯಿತ್ತಯ್ಯಾ
ಸಕಳೇಶ ಮಾದಿರಾಜಯ್ಯಗಳ ಧರ್ಮದಿಂದ.
ಎನ್ನ ಅಂತರಂಗ ಶುದ್ಧವಾಯಿತ್ತಯ್ಯಾ
ತೆಲುಗು ಜೊಮ್ಮಯ್ಯಗಳ ಧರ್ಮದಿಂದ.
ಎನ್ನ ಬಹಿರಂಗ ಶುದ್ಧವಾಯಿತ್ತಯ್ಯಾ
ಕೇಶಿರಾಜಯ್ಯಗಳ ಧರ್ಮದಿಂದ.
ಎನ್ನ ಸರ್ವಾಂಗ ಶುದ್ಧವಾಯಿತ್ತಯ್ಯಾ.
ಬಸವಣ್ಣ, ಚನ್ನಬಸವಣ್ಣ, ಪ್ರಭು, ವೀರಮಡಿವಾಳಯ್ಯಗಳ ಧರ್ಮದಿಂದ.
ಐಘಟದೂರ ರಾಮೇಶ್ವರಾ, ನಿಮ್ಮ ಶರಣರ ಧರ್ಮದಿಂದ
ನಾನು ಶುದ್ಧನಾದೆನಯ್ಯಾ.

ಅಮುಗಿ ದೇವಯ್ಯ ವಚನದ ಸಂಖ್ಯೆ:೩೨೩

**ಕಕ್ಕಯ್ಯನ ಪ್ರಸಾದವ ಕೊಂಡೆನ್ನ ಕುಲಸೂತಕ ಹೋಯಿತ್ತಯ್ಯಾ.**
**ಚೆನ್ನಯ್ಯನ ಪ್ರಸಾದವ ಕೊಂಡೆನ್ನ ಛಲಸೂತಕ ಹೋಯಿತ್ತಯ್ಯಾ**
**ದಾಸಯ್ಯನ ಪ್ರಸಾದವ ಕೊಂಡೆನ್ನ ತನು ಸೂತಕ ಹೋಯಿತ್ತಯ್ಯಾ**
**ಚಂದಯ್ಯನ ಪ್ರಸಾದವ ಕೊಂಡೆನ್ನ ಮನಸೂತಕ ಹೋಯಿತ್ತಯ್ಯಾ**
**ತೆಲುಗಜೊಮ್ಮಯ್ಯನ ಪ್ರಸಾದವ ಕೊಂಡೆನ್ನ ನೆನಹು ಸೂತಕ ಹೋಯಿತ್ತಯ್ಯಾ**
**ಬಿಬ್ಬಿ ಬಾಚಯ್ಯನ ಪ್ರಸಾದವ ಕೊಂಡೆನ್ನ ಭಾವ ಸೂತಕ ಹೋಯಿತ್ತಯ್ಯಾ**
**ಮೋಳಿಗೆಯ್ಯನ ಪ್ರಸಾದವ ಕೊಂಡೆನ್ನ ಜನನ ಸೂತಕ ಹೋಯಿತ್ತಯ್ಯಾ**
**ಕೋಲ ಶಾಂತಯ್ಯನ ಪ್ರಸಾದವ ಕೊಂಡೆನ್ನಂತರಂಗದ ಸೂತಕ ಹೋಯಿತ್ತಯ್ಯಾ**
**ಮೇದಾರ ಕೇತಯ್ಯನ ಪ್ರಸಾದವ ಕೊಂಡೆನ್ನ ಬಹಿರಂಗದ ಸೂತಕ ಹೋಯಿತ್ತಯ್ಯಾ**
**ಘಟ್ಟಿವಾಳಯ್ಯನ ಪ್ರಸಾದವ ಕೊಂಡೆನ್ನ ಸರ್ವಾಂಗದ ಸೂತಕ ಹೋಯಿತ್ತಯ್ಯಾ**
**ಬಸವಣ್ಣ ಚೆನ್ನಬಸವಣ್ಣ ಪ್ರಭುದೇವರು ಮಡಿವಾಳಯ್ಯ ಸಿದ್ಧರಾಮಯ್ಯ**
**ಸೊಡ್ಡಳ ಬಾಚರಸರು ಹಡಪದಪ್ಪಣ್ಣ ಶಂಕರ ದಾಸಿಮಯ್ಯ ಹೆಂಡದ ಮಾರಯ್ಯ**
**ಗಾಣದ ಕಣ್ಣಪ್ಪಯ್ಯ ಕೈಕೂಲಿ ಚಾಮಯ್ಯ ಬಹುರೂಪಿ ಚೌಡಯ್ಯ ಕಲಕೇತ ಬ್ರಹ್ಮಯ್ಯ**
**ಮೊದಲಾದ ಶಿವಗಣಂಗಳ ಪರಮಪ್ರಸಾದವ ಕೊಂಡು ಬದುಕಿದೆನಯ್ಯಾ.**

**ಮಹಾಘನ ಸದ್ಗುರು ಸಿದ್ಧ ಸೋಮನಾಥಲಿಂಗವೆ ನಿಮ್ಮ ಧರ್ಮ ನಿಮ್ಮ ಧರ್ಮ.**

"ತೆಲುಗೇಶ ಮಸಣಯ್ಯ ಏಳು ವಚನಗಳನ್ನು ಬರೆದಿದ್ದು, ಅವನ ವಚನದ ಅಂಕಿತ ತೆಲುಗೇಶ, ತೆಲುಗೇಶ್ವರ, ಶಂಭು ತೆಲುಗೇಶ್ವರ. ಇವನು ಗೋವುಗಳನ್ನು ಕಾಯುವ ಕಾಯಕದವನು. 'ಹಳದಿಯ ಸೀರೆಯನುಟ್ಟು???.' ಎಂದು ಪ್ರಾರಂಭವಾಗುವ ವಚನವು (೧೦೪೯)



ಗೋವಳಿಗನೊಬ್ಬನ ವೇಷದ ಆಕರ್ಷಕ ಚಿತ್ರವನ್ನು ಕೊಡುತ್ತದೆ". ಎಂದು ವಚನ ಮಹಾ ಸಂಪುಟದಲ್ಲಿ ಉಲ್ಲೇಖಿತಗೊಂಡಿದೆ. ಅವನ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿರುವುದಿಲ್ಲ. ಅವನ ವಚನ ಒಂದನ್ನು ಈ ಕೆಳಗಿನಂತೆ ನೋಡಬಹುದು.

ವಚನ ಸಂಖ್ಯೆ ೧೦೪೯.

**ಹಳದಿಯ ಸೀರೆಯನುಟ್ಟು**
**ಬಳಹದೋಲೆಯ ಕಿವಿಯಲಿಕ್ಕೆ**
**ಮೊಳಡಂಗೆಯ ಪಿಡಿದು, ಗುಲಗಂಜಿ ದಂಡೆಯ ಕಟ್ಟಿ**
**ತುತ್ತುರುತುರು ಎಂಬ ಕೊಳಲ ಬಾರಿಸುತ**
**ಅಪಳ ಚಪಳನೆಂಬ ಉಲಿವ ಗಂಟೆಯ ಕಟ್ಟಿ**
**ತುತ್ತುರು ಜಂಗುಳಿ ದೈವಗಳನೆಲ್ಲವ ಹಿಂಡು ಮಾಡಿ**
**ಕಾವ ನಮ್ಮ ಶಂಭು ತೆಲುಗೇಶ್ವರನು ಮನೆಯ ಗೋವಳನೀತ.**

ಶಿವಶರಣೆಯರ ವಚನ ಸಂಪುಟದ ಅಜ್ಞಾತ ವಚನಕಾರ್ತಿಯರ ಪಟ್ಟಿಯಲ್ಲಿ ಮಸಣಯ್ಯ ಪ್ರಿಯ ಮಾರೇಶ್ವರಲಿಂಗ ಅಂಕಿತದ ವಚನ ಇದೆ. "ಈ ಅಂಕಿತದ ಕರ್ತೃವಿನ ಹೆಸರು ಇತ್ಯಾದಿ ವಿವರಗಳು ದೊರೆತಿಲ್ಲ. ವಚನ ರಚನೆಯ ರೀತಿ ಹಾಗೂ ಅಲ್ಲಿ ಬಳಸಿದ ಪದ ಪರಿಭಾಷೆಗಳಿಂದ ಇದು ಕೆಳವರ್ಗದ ಶರಣೆಯೊಬ್ಬಳ ರಚನೆ ಇರಬಹುದೆಂದು ಭಾವನೆ ಮೂಡುತ್ತದೆ. ವಚನಗಳಲ್ಲಿ ಬಳಸಿದ ಮಾರೇಶ್ವರ ಎಂಬ ಹೆಸರು ಮತ್ತು ಹೆಂಡ, ಖಂಡ ಎಂಬ ಪದಗಳು ಹೆಂಡದ ಮಾರಯ್ಯನನ್ನು ಉದ್ದೇಶಿ ಹೇಳಿದಂತಿದೆ. ಹೀಗಿದ್ದಲ್ಲಿ ಈಕೆ ಅವನ ಪುಣ್ಯಸ್ತ್ರೀಯಾಗಿರಬಹುದೆ? ಎಂಬ ಅನುಮಾನ ಮೂಡುತ್ತದೆ. ಅದು ಖಚಿತವಾಗಬೇಕಾದರೆ ಇನ್ನಷ್ಟು ನಿರ್ಧಿಷ್ಟ ಆಧಾರಗಳು ಬೇಕಾಗುತ್ತವೆ. ಈ ವಚನದಲ್ಲಿ ಮೈಲಾರಲಿಂಗನ ಭಕ್ತರ ವಿಚಿತ್ರ ಆಚರಣೆಗಳನ್ನು ಕಟುವಾಗಿ ವಿಡಂಬಿಸಲಾಗಿದೆ." ಎಂದು ವಿವರಣೆ ನೀಡಿದ್ದಾರೆ. ಈ ಶರಣೆ ಹೆಂಡದ ಮಾರಯ್ಯನ ಹೆಂಡತಿಯಾಗಿರದೆ ಬೇರೊಬ್ಬ ಶರಣನ ಹೆಂಡತಿಯಾಗಿದ್ದಾಳೆ ಎಂಬುವುದು ನಮ್ಮ ತರ್ಕವಾಗಿದೆ. ಗಜೇಶ ಮಸಣಯ್ಯಗಳ ಪುಣ್ಯಸ್ತ್ರೀ ಮಸಣಯ್ಯ ಪ್ರಿಯ ಗಜೇಶ್ವರ ಅಂಕಿತದಲ್ಲಿ, ಉರಿಲಿಂಗಪೆದ್ದಿಗಳ ಪುಣ್ಯಸ್ತ್ರೀ ಕಾಳವ್ವೆ ಉರಿಲಿಂಗಪೆದ್ದಿಗಳರಸ ಅಂಕಿತದಲ್ಲಿ, ಆಯ್ದಕ್ಕಿ ಲಕ್ಕಮ್ಮ ಮಾರಯ್ಯಪ್ರಿಯ ಅಮೇಶ್ವರಲಿಂಗ ಅಂಕಿತದಲ್ಲಿ, ದುಗ್ಗಳೆ ದಾಸಯ್ಯಪ್ರಿಯ ರಾಮನಾಥ ಅಂಕಿತದಲ್ಲಿ, ಹಡಪದಪ್ಪಣ್ಣಗಳ ಪುಣ್ಯಸ್ತ್ರೀ ಲಿಂಗಮ್ಮ ಅಪ್ಪಣ್ಣಪ್ರಿಯ ಚೆನ್ನಬಸವಣ್ಣ ಅಂಕಿತದಲ್ಲಿ ವಚನಗಳನ್ನು ರಚಿಸಿದಂತೆ ಅನಾಮಿಕ ಶರಣೆ ತನ್ನ ಗಂಡನ ಹೆಸರನ್ನು ಸೇರಿಸಿ ಮಸಣಯ್ಯ ಪ್ರಿಯ ಮಾರೇಶ್ವರಲಿಂಗ ಅಂಕಿತದಲ್ಲಿ ವಚನ ರಚಿಸಿದ್ದಾಳೆ. ಆ ಶರಣೆಯ ಪತಿ ಯಾರು? ವಚನಾಂಕಿತದಲ್ಲಿರುವ ಮಸಣಯ್ಯ ಹೆಸರು ತೆಲುಗೇಶ ಮಸಣಯ್ಯನಿಗೆ ಸರಿ ಹೊಂದುವುದರಿಂದ ಆ ಅನಾಮಿಕ ಶರಣೆ ತೆಲುಗೇಶ ಮಸಣಯ್ಯನ ಪತ್ನಿ ಎಂದು ಒಪ್ಪಿಕೊಳ್ಳಬಹುದು. ವಿಶ್ವಬಂಧು ಮರುಳಸಿದ್ಧ ಬಾಲ್ಯದಲ್ಲಿ ದನ ಕಾದಂತೆ, ತೆಲುಗೇಶ ಮಸಣಯ್ಯ ಕೂಡ ದನ ಕಾಯುವ ಕಾಯಕ ಮಾಡಿರುವುದಕ್ಕೆ ಅವನ ವಚನವೇ ಸಾಕ್ಷಿ. ಆ ಕಾಲದಲ್ಲಿ ಮೇಲ್ವರ್ಗದವರು ಯಾರೂ ದನ ಕಾಯುತ್ತಿರಲಿಲ್ಲ. ಆದ್ದರಿಂದ ಅವನನ್ನು ಕೆಳವರ್ಗದವನೆಂದು ಪರಿಗಣಿಸಬಹುದು. ಮಸಣಯ್ಯ ಪ್ರಿಯ ಮಾರೇಶ್ವರಲಿಂಗ ಅಂಕಿತದ ವಚನವು ಕೂಡ ಕೆಳವರ್ಗದವರ ಧ್ವನಿಯನ್ನು ವ್ಯಕ್ತಪಡಿಸುತ್ತದೆ. ಅವಳ ವಚನ ಈ ಕೆಳಗಿನಂತೆ ಇದೆ.

ವಚನದ ಸಂಖ್ಯೆ: ೧೩೫೦.

ಅಯ್ಯಾ ಅಸ್ಥಿ ಚರ್ಮ ಮಾಂಸ ಶುಕ್ಲ ಶೋಣಿತದ ಗುಡಿಯ ಕಟ್ಟಿ
ಹಂದಿಯ ದೇವರ ಮಾಡಿ ಕುಳ್ಳಿರಿಸಿ
ಪಾದರಕ್ಷೆಯ ಪೂಜೆಯ ಮಾಡಿ
ನೈವೇದ್ಯವ ಹಿಡಿದು, ಮೂತ್ರದ ನೀರ ಕುಡಿಸಿ,
ಶ್ವಾನ ಕುಕ್ಕಟನಂತೆ ಕೂಗಿ ಬೊಗುಳಿ
ದಡದಡ ನೆಲಕ್ಕೆ ಬಿದ್ದು ಕಾಡಿ ಬೇಡಿಕೊಂಡರೆ
ಆ ದೇವರ ಒಡೆಯ ಮಾರೇಶ್ವರ
ಖಂಡ ಹೆಂಡ ಕೊಡುವನಲ್ಲದೆ ಅನ್ನ ನೀರು ಕೊಡುವನೆ?
ಆ ದೇವರಿಗೆ ಹೊಲೆಯರು ಮೆಚ್ಚುವರಲ್ಲದೆ
ಉತ್ತಮರು ಮೆಚ್ಚರು ನೋಡಯ್ಯ,
ಮಸಣಯ್ಯಪ್ರಿಯ ಮಾರೇಶ್ವರಲಿಂಗವೆ.

ತೆಲುಗುಬಾಳು ಸಿದ್ಧಯ್ಯ, ತೆಲುಗು ಜೊಮ್ಮಯ್ಯ ಹಾಗೂ ತೆಲುಗೇಶ ಮಸಣಯ್ಯ ಇವರ ಹೆಸರುಗಳಲ್ಲಿರುವ ತೆಲುಗು ಪದ ಇವರೆಲ್ಲರಿಗೂ ಯಾವುದೋ ಸಂಬಂಧವನ್ನು ಕಲ್ಪಿಸುವಂತಿದೆ. ನಮ್ಮ ಊಹೆ ಏನೆಂದರೆ ಜೊಮ್ಮಯ್ಯ ಮತ್ತು ಮಸಣಯ್ಯ ಸಿದ್ಧಯ್ಯನ ತೆಲುಗು ಬಾಳು ಗ್ರಾಮದವರು ಇರಬಹುದು. ಇದರ ಬಗ್ಗೆ ಹೆಚ್ಚಿನ ಸಂಶೋಧನೆಯ ಅಗತ್ಯವಿದೆ. ತೆಲುಗುಬಾಳು ಬೇಚಿರಾಖ್ ಗ್ರಾಮದಲ್ಲಿ ಉತ್ಖನನ ನಡೆಸಬೇಕಾಗಿದೆ.

**ಪರಾಮರ್ಶನಾ ಗ್ರಂಥಗಳು.**


೦೧. ಬಸವ ಯುಗದ ವಚನ ಮಹಾ ಸಂಪುಟ.
೦೨. ಶಾಸನಗಳಲ್ಲಿ ಶಿವಶರಣರು: ಡಾ.ಎಂ.ಎಂ.ಕಲಬುರಗಿ.
೦೩. ದಿಟ್ಟ ಹೆಜ್ಜೆ ಧೀರಕ್ರಮ: ಸಂ. ಮಹಾದೇವ ಬಣಕಾರ.
೦೪. ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು.
೦೫. ಮೈಸೂರು ಸ್ಟೇಟ್ ನ ತುಮಕೂರು ಜಿಲ್ಲೆಯ ಗೆಜೆಟಿಯರ್.
೦೬. ಚಿಕ್ಕ ರಾಚಯ್ಯನ ಮಹಾದೇವಿಯಕ್ಕನ ಸಾಂಗತ್ಯ. ಸಂ. ಡಾ.ಎಸ್. ವಿದ್ಯಾಶಂಕರ.


■



ಅರಿವಿನ ಕುಳವನರಿಯೆ, ಮರಹಿನ ತೆರನನರಿಯೆ
ಅರಿವು, ಮರಹಳಿದ ಗವರೇಶ್ವರ ಲಿಂಗಕ್ಕೆ
ಅರಿವೇ ಅರ್ಪಿತ, ಮರೆವೇ ಅನರ್ಪಿತ
ಮೊರನ ಹೆಣೆವ ಗೌರ, ನಾನೆತ್ತ ಬಲ್ಲೆನಯ್ಯಾ.

**ಮೇದರ ಕೇತಯ್ಯ**



## ವಚನ ರಸಪ್ರಶ್ನೆ ಸ್ಪರ್ಧೆ

### ವಚನ ರಸಪ್ರಶ್ನೆ-೧೫ರ ಸರಿಯುತ್ತರಗಳು

೧. (ಆ) ಅರಿವಿನ ಮಾರಿತಂದೆ ೨. (ಈ) ಗೋಪತಿನಾಥ ವಿಶ್ವೇಶ್ವರ ಲಿಂಗ
೩. (ಇ) ಡಾ. ಉಷಾಕಿರಣ್ ೪. (ಈ) ಅಭಾವ ೫. (ಆ) ೮

“ಮಹಾಮನೆ”ಯ ಓದುಗರು “ವಚನ ರಸಪ್ರಶ್ನೆ-೧೫”ರ ಉತ್ತರಗಳನ್ನು ಕಳಿಸಿಲ್ಲದ ಕಾರಣ ಈ ಸಂಚಿಕೆಯ ಬಹುಮಾನವನ್ನು ಯಾರಿಗೂ ಕೊಡಲಾಗಿಲ್ಲ.

### ವಚನ ರಸಪ್ರಶ್ನೆ -೧೬ರ ಪ್ರಶ್ನೆಗಳು

೧. “ವಚನ ಸಾಹಿತ್ಯ ಒಂದು ಹಕ್ಕಿನೋಟ” ಕೃತಿಯ ಲೇಖಕರು?
(ಅ) ಡಾ.ಎಂ. ಚಿದಾನಂದಮೂರ್ತಿ (ಆ) ಷಣ್ಮುಖಯ್ಯ ಅಕ್ಕೂರಮಠ
(ಇ) ಡಾ.ಪಿ.ವಿ. ನಾರಾಯಣ (ಈ) ಪ್ರೊ.ಜಿ.ಎಸ್. ಸಿದ್ಧಲಿಂಗಯ್ಯ

೨. “ಕುರುಡ ಕಣ್ಣ ಕಾಣಲರಿಯದೆ ಕನ್ನಡಿಯ ಬಯ್ವನು” ಎನ್ನುವ ಸಾಲು ಯಾರ ವಚನದಲ್ಲಿ ಬರುತ್ತದೆ?
(ಅ) ಅಕ್ಕಮಹಾದೇವಿ (ಆ) ಅಂಬಿಗರ ಚೌಡಯ್ಯ
(ಇ) ಗೊಗ್ಗವ್ವೆ (ಈ) ಚೆನ್ನಬಸವಣ್ಣ

೩. ಶಾಂತ ಕೂಡಲಸಂಗಮದೇವ – ಇದು ಯಾರ ಅಂಕಿತ?
(ಅ) ಸೊಡ್ಡಳ ಬಾಚರಸ (ಆ) ಗಣದಾಸಿ ವೀರಣ್ಣ
(ಇ) ಗುಹೇಶ್ವರಯ್ಯ (ಈ) ಅಮುಗೆ ರಾಯಮ್ಮ

೪. ‘ಬವರ’ ಪದದ ಅರ್ಥ?
(ಅ) ವ್ಯರ್ಥ (ಆ) ಬರಗಾಲ
(ಇ) ಯುದ್ಧ (ಈ) ಗದರು

೫. ವಚನ ಚಿಂತನ ಪುಸ್ತಕದ ಸಂಪಾದಕರು ಯಾರು?
(ಅ) ಡಾ.ಬಿ.ಸಿ. ವೀರಪ್ಪ (ಆ) ಡಾ.ಎಸ್. ವಿದ್ಯಾಶಂಕರ
(ಇ) ಗೊ.ರು. ಚನ್ನಬಸಪ್ಪ (ಈ) ಕೆ.ಬಿ. ಮಲ್ಲೇಶಯ್ಯ

ಈ ಐದೂ ಪ್ರಶ್ನೆಗಳಿಗೆ ಸರಿಯಾದ ಉತ್ತರಗಳನ್ನು ಬರೆದು ಅಂಚೆಯ ಮೂಲಕ ಮಾತ್ರ ಕಳಿಸಬೇಕು. ಐದೂ ಉತ್ತರಗಳು ಸರಿಯಾಗಿರುವ ಪತ್ರಗಳನ್ನು ಮಾತ್ರ ಸ್ಪರ್ಧೆಗೆ ಪರಿಗಣಿಸಲಾಗುವುದು. ಇಂಥ ಪತ್ರಗಳಲ್ಲಿ ಲಾಟರಿಯ ಮೂಲಕ ಇಬ್ಬರ ಉತ್ತರಗಳನ್ನು ಆಯ್ದು, ಅವರಿಗೆ ಪುಸ್ತಕ ರೂಪದಲ್ಲಿ ಬಹುಮಾನವನ್ನು ಕಳಿಸಲಾಗುವುದು. ನಿಮ್ಮ ಉತ್ತರಗಳು ಬರಲು ಪ್ರತಿ ತಿಂಗಳ ೨೦ನೆಯ ದಿನಾಂಕವು ಕೊನೆಯದಾಗಿರುತ್ತದೆ.

**ಅಂಚೆಯ ಮೂಲಕ ಮಾತ್ರ ನಿಮ್ಮ ಉತ್ತರಗಳು ತಲುಪಬೇಕಾದ ವಿಳಾಸ**

**ಅಧ್ಯಕ್ಷರು, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, “ವಚನ ರಸಪ್ರಶ್ನೆ”, ೧ನೆಯ ಮುಖ್ಯರಸ್ತೆ, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು-೫೬೦೦೭೦.**

## ಮಹಾಮನೆ ಸುಡೊಕು – ೩೧ರ ಸರಿಯುತ್ತರ

ಕ.ಚ. ಪಾಟೀಲ

| | | | | | | | | |
|---|---|---|---|---|---|---|---|---|
| ತ | ರಿ | ಚಾ | ಲ್ಲೊ | ನ್ನ | ಸ | ಲ್ಲ | ದು | ವಿ |
| ದು | ವಿ | ನ್ನ | ಚಾ | ಲ್ಲ | ರಿ | ತ | ಸ | ಲ್ಲೊ |
| ಲ್ಲೊ | ಲ್ಲ | ಸ | ವಿ | ತ | ದು | ಚಾ | ನ್ನ | ರಿ |
| ವಿ | ಚಾ | ದು | ರಿ | ಸ | ನ್ನ | ಲ್ಲೊ | ಲ್ಲ | ತ |
| ರಿ | ನ್ನ | ಲ್ಲ | ತ | ದು | ಲ್ಲೊ | ಸ | ವಿ | ಚಾ |
| ಸ | ತ | ಲ್ಲೊ | ಲ್ಲ | ಚಾ | ವಿ | ನ್ನ | ರಿ | ದು |
| ನ್ನ | ಲ್ಲೊ | ರಿ | ಸ | ವಿ | ಚಾ | ದು | ತ | ಲ್ಲ |
| ಚಾ | ದು | ತ | ನ್ನ | ರಿ | ಲ್ಲ | ವಿ | ಲ್ಲೊ | ಸ |
| ಲ್ಲ | ಸ | ವಿ | ದು | ಲ್ಲೊ | ತ | ರಿ | ಚಾ | ನ್ನ |

| | | | | | | | | |
|---|---|---|---|---|---|---|---|---|
| ತ | ನ್ನ | ವಿ | ಚಾ | ರಿ | ಸ | ಲ್ಲೊ | ಲ್ಲ | ದು |

ಮಹಾಮನೆಯ ಹಲವಾರು ಓದುಗರು ವಚನ ಸುಡೊಕು ನಂ. ೩೧ ಸರಿಯುತ್ತರಗಳನ್ನು ಕಳಿಸಿದ್ದಾರೆ. ಅವುಗಳಲ್ಲಿ ಲಾಟರಿ ಎತ್ತುವ ಮೂಲಕ ಆಯ್ಕೆಯಾದ ಇಬ್ಬರು ವಿಜೇತರ ಹೆಸರುಗಳು ಇಂತಿವೆ.

೧. **ಶ್ರೀಮತಿ ವಿಜಯ ಚಂದ್ರಶೇಖರ್, ದಾವಣಗೆರೆ**

೨. **ಡಾ.ಬಿ.ಎಸ್. ಬಸವರಾಜಯ್ಯ, ಮೈಸೂರು**

ಬಹುಮಾನ ವಿಜೇತರಿಗೆ ಮಹಾಮನೆಯ ಅಭಿನಂದನೆಗಳು.

ವಿಜೇತರಿಗೆ ಪುಸ್ತಕ ರೂಪದಲ್ಲಿ ಬಹುಮಾನಗಳನ್ನು ಅವರ ವಿಳಾಸಕ್ಕೆ ಕಳಿಸಲಾಗಿದೆ.



## ಮಹಾಮನೆ ಸುಡೊಕು – ೩೨

ಕ.ಚ. ಪಾಟೀಲ

ಆಡುವ ಬಗೆ:

೧) ಅಲ್ಲಮ ಪ್ರಭು ವಚನದಲ್ಲಿ ಬರುವ ಒಂಭತ್ತು ಅಕ್ಷರಗಳ ಪದಪುಂಜದ ಒಂದೊಂದು ಅಕ್ಷರವನ್ನು ಒಂಭತ್ತು ಕಪ್ಪು ಚೌಕಗಳಲ್ಲಿ ಕೊಡಲಾಗಿದೆ. ಮೊದಲು ಈ ಅಕ್ಷರಗಳನ್ನು ಬಳಸಿಕೊಂಡು, ಕೆಳಗೆ ಕೊಟ್ಟಿರುವ ಒಂಭತ್ತು ಚೌಕಗಳ ಅಡ್ಡಸಾಲಿನಲ್ಲಿ ಆ ಪದಪುಂಜವನ್ನು ತುಂಬಬೇಕು.

೨) ನಂತರ ಈ ಒಂಭತ್ತು ಅಕ್ಷರಗಳನ್ನು ಬಳಸಿಕೊಂಡು ಖಾಲಿ ಇರುವ ಚೌಕಗಳನ್ನು ತುಂಬಬೇಕು.

೩) ಹೀಗೆ ತುಂಬುವಾಗ ಈ ಒಂಭತ್ತು ಅಕ್ಷರಗಳು ಅಡ್ಡ ಅಥವಾ ಉದ್ದ ಸಾಲಿನಲ್ಲಿ ಮತ್ತು ೩X೩ರ ಚೌಕಟ್ಟಿನಲ್ಲಿ ಪುನರಾವರ್ತನೆಯಾಗದ ಹಾಗೆ ಒಮ್ಮೆ ಮಾತ್ರ ಬರಬೇಕು.

೪) ಮುಂದಿನ ಸಂಚಿಕೆಯಲ್ಲಿ ಸುಡೊಕು ನಂ–೩೨ರ ಸರಿ ಉತ್ತರವನ್ನು ಪ್ರಕಟಿಸಲಾಗುವುದು.

| | | | | | | | | |
|---|---|---|---|---|---|---|---|---|
| | | | ದ | | ನಾ | | ಕ | |
| ದ | | ಳಿ | ನ್ನ | | | | | |
| ಬ | | ನಾ | | | ನ | ಎ | ರಿ | |
| | | | | | ಬ | | | |
| | ಎ | ನ್ನ | ಳಿ | ರಿ | | ನ | | |
| ಳಿ | ಬ | | | ನಾ | | ಕ | ದ | ಎ |
| | ನಾ | | | ದ | ಎ | ನ | | |
| ರಿ | | | | | ಕ | | ನ್ನ | ಬ |
| ನ | | ಕ | | ನ್ನ | | | | ರಿ |

| | | | | | | | | |
|---|---|---|---|---|---|---|---|---|
| | | | | | | | | |

ಈ 'ವಚನ ಸುಡೊಕು'ವನ್ನು ಸರಿಯಾಗಿ ತುಂಬಿ ಕಳಿಸಿದ ಸ್ಪರ್ಧಿಗಳಲ್ಲಿ ಲಾಟರಿ ಎತ್ತುವ ಮೂಲಕ ಇಬ್ಬರಿಗೆ ಪುಸ್ತಕ ರೂಪದ ಬಹುಮಾನವನ್ನು ಕಳಿಸಿಕೊಡಲಾಗುವುದು. ತಮ್ಮ ಉತ್ತರ ತಲುಪಲು ಕೊನೆಯ ದಿನಾಂಕ ೨೦.೦೧.೨೦೨೦. ವಿಳಾಸ: **ಸಂಪಾದಕರು, "ಮಹಾಮನೆ", ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೮ನೆಯ ವಿಭಾಗ, ಜಯನಗರ, ಬೆಂಗಳೂರು– ೫೬೦ ೦೭೦. ಈ ಮೇಲ್ ವಿಳಾಸ: mahamanemagazine@gmail.com** ಕಳಿಸುವವರ ವಿಳಾಸ ಮತ್ತು ದೂರವಾಣಿ ಸಂಖ್ಯೆ:

# ನಾವು ಮತ್ತು ಮಾತು

**ಪ್ರೊ. ಎಂ. ಪ್ರಸನ್ನಕುಮಾರ್**

"ಅವನು ಏನು ಚೆನ್ನಾಗಿ ಮಾತಾಡ್ತಾನಯ್ಯ. ಕೇಳ್ತಾ ಇದ್ದರೆ ಮತ್ತೂ ಕೇಳ್ಬೇಕು ಅನಿಸುತ್ತಿರುತ್ತೆ".

"ಅವನ ಮಾತಾ ಥೂ! ಏನು ಹೊಲಸು ಮಾತಾಡ್ತಾನ್ರಿ. ಕೇಳೋಕೆ ಆಗಲ್ಲಪ್ಪಾ!"

"ಮಾತೂ ಅಂದರೆ, ಅವನ ಮಾತೂರೀ. ಎಂತಹ ಸಂದರ್ಭದಲ್ಲೂ ಎಷ್ಟು ಸ್ಪಷ್ಟವಾಗಿ, ನೇರವಾಗಿ ಮಾತಾಡ್ತಾನೆ. ಎಲ್ಲಿಂದ ಕಲ್ತಾರೀ!"

ಇಂತಹ ಅನೇಕ ಸಂಭಾಷಣೆಗಳನ್ನು ನೀವು ಆಗಾಗ್ಯೆ ಸುತ್ತಲ ವ್ಯವಹಾರದಲ್ಲಿ ಕಾಣುತ್ತಿರುತ್ತೇವೆ. ಅಂದರೆ ಚೆನ್ನಾಗಿ ಮಾತಾಡುವುದು, ಅದರಲ್ಲೂ ಹಿತವಾಗಿ ಮಾತಾಡುವುದು ಒಂದು ಕಲೆ. ಜನಮೆಚ್ಚುವಂತೆ ಮಾತಾಡುವುದು ಸುಲಭದ ಮಾತಲ್ಲ. ಜನರನ್ನೇನು, ಶಿವನನ್ನೇ ಮೆಚ್ಚಿಸುವಂತಹ ಮಾತುಗಾರರು ನಮ್ಮಲ್ಲಿದ್ದಾರೆ. ಇದಕ್ಕೆ ಮುಖ್ಯವಾಗಿ ಬೇಕಾದುದು ಲೌಕಿಕ ಜ್ಞಾನದ ಜೊತೆಗೆ ಅಂತರಂಗ, ಬಹಿರಂಗದ ಪರಿಶುದ್ಧತೆ.

ಮಾತಿನಲ್ಲಿ ಇಂತಹ ಸಾಧನೆ ಮಾಡುವ ಗುಟ್ಟು ಏನು? ಇದಕ್ಕೆ ವಚನಕಾರರು ತಮ್ಮ ಸರಳ ಮಾತುಗಳಲ್ಲಿ ಮನಮುಟ್ಟುವಂತೆ ಹೇಳುತ್ತಾರೆ. ಅವರ ಮಾತುಗಳು ಅವರ ಪರಿಸರ, ಕಾಯಕದ ಹಿನ್ನೆಲೆಯಲ್ಲಿ ಮೂಡಿಬಂದಿರುತ್ತವೆ.

ಮೊದಲನೆಯದಾಗಿ ಬಸವಣ್ಣನವರ ವಚನ –

**ನುಡಿದಡೆ ಮುತ್ತಿನ ಹಾರದಂತಿರಬೇಕು.**
**ನುಡಿದಡೆ ಮಾಣಿಕ್ಯದ ದೀಪ್ತಿಯಂತಿರಬೇಕು.**
**ನುಡಿದಡೆ ಸ್ಫಟಿಕದ ಸಲಾಕೆಯಂತಿರಬೇಕು.**
**ನುಡಿದಡೆ ಲಿಂಗ ಮೆಚ್ಚಿ ಅಹುದಹುದೆನಬೇಕು.**
**ನುಡಿಯೊಳಗಾಗಿ ನಡೆಯದಿದ್ದಡೆ,**
**ಕೂಡಲಸಂಗಮದೇವನೆಂತೊಲಿವನಯ್ಯಾ?**

ಅದೇ ರೀತಿ–

ಸ್ವತಂತ್ರ ಸಿದ್ಧಲಿಂಗೇಶ್ವರರ ಈ ವಚನಗಳನ್ನು ನೋಡಿ –

**ಹಾವಾಡಿಗ ಹಾವಾಡಿಸುವಲ್ಲಿ ತನ್ನ ಕಾಯ್ದುಕೊಂಡು**
**ಹಾವನಾಡಿಸುವಂತೆ,**
**ಆವ ಮಾತನಾಡಿದರೂ ತನ್ನ ಕಾಯ್ದು ಆಡಬೇಕು.**
**ಅದೆಂತೆದಡೆ**
**ತನ್ನ ರಚನವೆ ತನಗೆ ಹಗೆಯಹುದಾಗಿ,**
**ಅನ್ನಿಗರಿಂದ ಬಂದಿತ್ತೆನಬೇಡ.**
**ಅಳಿವುದು ಉಳಿವುದು ತನ್ನ ವಚನದಲ್ಲಿಯೆ ಅದೆ.**
**ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ, ಹಗೆಯು ಕೆಳೆಯು**
**ತನ್ನ ವಚನವೆ ಬೇರಿಲ್ಲ.**

ಅವರದೇ ಮತ್ತೊಂದು ವಚನ–

**ಮಾತಿನ ಪಸರದ ವ್ಯವಹಾರದೊಳಗೆ ಸಿಕ್ಕಿ**



**ನೂರು ತಾಕುಗೊಳಿತ್ತಿರ್ಪವಂಗೆ ಮಹದ ಮಾತೇಕೆ?**
**ಕೊರಳುದ್ದಕ್ಕೆ ಹೂಳಿಸಿಕೊಂಡು ಮುಗಿಲುದ್ದಕ್ಕೆ**
**ನೆಗೆದೆಹೆನೆಂಬವನ ಹಾಗೆ,**
**ಶಿವನ ಜೋಕೆಯನರಿಯದೆ ಮಾತನಾಡುವ ಮಾತೆಲ್ಲವು**
**ಮಾತಿನ ಮಾಲೆಯಲ್ಲದೆ, ಅಲ್ಲಿ ನಿಜವಿಲ್ಲ.**
**ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ, ಅವರೆಲ್ಲ ಭೂಭಾರಕರಾದರು.**

ಈ ವಚನಗಳಲ್ಲಿ ಮೊದಲಿನ ವಚನ ಬಸವಣ್ಣನವರದು. ಅವರು ಮಾತಿನ ಮಹತ್ವವನ್ನು ವಿವರಿಸುವಲ್ಲಿ ತಮ್ಮ ವಚನದಲ್ಲಿ ಬಳಸಿರುವ ಹೋಲಿಕೆಗಳು 'ಮಾತು ಮುತ್ತಿನ ಹಾರ', 'ಮಾತು ಮಾಣಿಕ್ಯದ ದೀಪ್ತಿ', 'ಮಾತು ಸ್ಫಟಿಕದ ಸಲಾಕೆ' (ಕಿರಣ) – ಎನ್ನುವ ಮಾತುಗಳಲ್ಲಿ ಅವರು ಬದುಕಿದ, ಬೆಳೆದ ಪರಿಸರಕ್ಕೆ ಸಾಕ್ಷಿಯಾಗಿವೆ. ಬಸವಣ್ಣ ಮೊದಲು ವಿಪ್ರಕುಲಕ್ಕೆ ಸೇರಿದವರು. ಅವರಿಗೆ ಶಾಸ್ತ್ರ, ಶ್ಲೋಕಗಳ ಪರಿಚಯವಿತ್ತು. ಹೀಗಾಗಿ ಅವರ ಬರಹ ಪಾಂಡಿತ್ಯ ಮಹತ್ವದ್ದು. ಮುಂದೆ ಅವರು ಸೇರಿದ್ದು ರಾಜಾಶ್ರಯ. ಅಲ್ಲಿ ಅವರಿಗೆ ಮುತ್ತು, ಮಾಣಿಕ್ಯ, ಸ್ಫಟಿಕಗಳ ಪರಿಚಯವಿತ್ತು. ಹೀಗಾಗಿ ಸಹಜವಾಗಿಯೇ ಆ ಹೋಲಿಕೆಗಳನ್ನು ಬಳಸಿ ಮಾತು ಹೇಗಿರಬೇಕು? ಎಂದು ತಿಳಿಸುತ್ತಾರೆ. ಮುತ್ತು ಎಂದಾಗ ಅದು ನವರತ್ನಗಳಲ್ಲಿ ಒಂದು. ಅದು ಬೆಲೆಬಾಳುವಂತಹುದು. ಅಂದರೆ ಮಾತಿನ ಬೆಲೆ ಅಷ್ಟು ಉನ್ನತವಾದುದು. 'ಮುತ್ತು' ಎಂದಾಗ ಇನ್ನೊಂದು ಅರ್ಥವನ್ನೂ ಇಲ್ಲಿ ಗಮನಿಸಬಹುದು. 'ಮುತ್ತು' ಎಂದರೆ ವೃದ್ಧಾಪ್ಯ, ಮುದಿತನ ಎಂಬ ಅರ್ಥವೂ ಇದೆ. ಕರ್ನಾಟಕದ ಕೆಲವು ಭಾಗದಲ್ಲಿ ವೃದ್ಧರನ್ನು 'ಮುತ್ಯಾ' ಎಂದು ಕರೆಯುವುದು ನೋಡಿದ್ದೇವೆ. ಅಂದರೆ ವೃದ್ಧಾಪ್ಯದಲ್ಲಿ ವಯಸ್ಸು ವಾಗಿರುತ್ತದೆ. ಬುದ್ಧಿಪಕ್ವವಾಗಿರುತ್ತದೆ. ಆಡುವ ಮಾತು ಅಳತೆಗೆ ಒಳಪಟ್ಟಿರುತ್ತದೆ. ಮಾತು ಮಾಣಿಕ್ಯದ ದೀಪ್ತಿಯಾಗಬೇಕು – ಎನ್ನುವಲ್ಲಿ ಅದೂ ಕೂಡ ಒಂದೂ ಬೆಲೆಬಾಳುವ ರತ್ನ–ನವರತ್ನಗಳಲ್ಲಿ ಒಂದು. ಮಾಣಿಕ್ಯದ ಬೆಳಕು **ಸ್ವಯಂಜಲಿಸುವಂತಹುದು**. ಸೂರ್ಯನ ಬೆಳಕಿನಂತೆ ಶಾಖ ತುಂಬಿದ್ದಲ್ಲ, ಚಂದ್ರನ ಬೆಳಕಿನಂತೆ ತಂಪು. ಹೀಗೆ ಮಾತು ಇರಬೇಕು. ಅದನ್ನು ಅನುಭವಿಸುವಾಗ ಹಿತವಾಗಬೇಕು, ಆನಂದವಾಗಬೇಕು. ಸ್ಫಟಿಕದ ಸಲಾಕೆಯೆಂದಾಗ ಅದರ ಪಾರದರ್ಶಕತೆ ಮುಖ್ಯವಾಗುತ್ತದೆ. ಮಾತಿನಲ್ಲಿ ಕೊಂಕು, ವ್ಯಂಗ್ಯ, ದ್ವಂದ್ವಾರ್ಥಗಳು ಬೆರೆತಿದ್ದರೆ ಇತರರಿಗೆ ನೋವಾಗುವುದಿಲ್ಲವೆ?

ಸ್ವಚ್ಛ ಮಾತುಗಳಿಂದ ಜನರನ್ನೂ ರಂಜಿಸಬಹುದು, ಶಿವನನ್ನೂ ಮೆಚ್ಚಿಸಬಹುದು. ಕೊನೆಗೆ ಬಸವಣ್ಣ ಒಂದು ಎಚ್ಚರಿಕೆಯನ್ನೂ ಕೊಡುತ್ತಾರೆ. ನುಡಿದರೆ ಮಾತ್ರ ಸಾಲದು, ನುಡಿದಂತೆ ನಡೆಯಲೂ ಬೇಕು. ಇಂತಹವರಿಗೆ ಮಾತ್ರ ಕೂಡಲ ಸಂಗಮ ಒಲಿಯುತ್ತಾನೆ.

ಮಾತಿನ ಮಹಿಮೆಯನ್ನು ವ್ಯಾಖ್ಯಾನಿಸುವಲ್ಲಿ ಸಾಮಾನ್ಯ ವಚನಕಾರರೂ ಹಿಂದೆ ಬಿದ್ದಿಲ್ಲ. ತಮ್ಮ ಪರಿಸರ, ಅನುಭವದ ಹಿನ್ನೆಲೆಯಲ್ಲಿಯೇ ಮಾತಿನ ಬಗ್ಗೆ ಸ್ವತಂತ್ರ ಸಿದ್ಧಲಿಂಗೇಶ್ವರರು ಮೇಲೆ ಉಲ್ಲೇಖಿಸಿರುವ ವಚನಗಳಲ್ಲಿ ಅವರ ವಿಚಾರಧಾರೆಗಳನ್ನು ಪ್ರಸ್ತುತಪಡಿಸಿರುವುದನ್ನು ಗಮನಿಸಬಹುದು.

ಸ್ವತಂತ್ರ ಸಿದ್ಧಲಿಂಗೇಶ್ವರರು ೧೬ನೆಯ ಶತಮಾನದ ಉತ್ತರಾರ್ಧದಲ್ಲಿ ಬದುಕಿದ್ದವರು. ಇವರು ತೋಂಟದ ಸಿದ್ಧಲಿಂಗೇಶ್ವರರ ಪರಂಪರೆಗೆ ಸೇರಿದವರು. ಮಂಡ್ಯ ಜಿಲ್ಲೆ, ಕೆ.ಆರ್. ಪೇಟೆ ತಾಲ್ಲೂಕಿನ ಕಾಪನಹಳ್ಳಿಯವರು. ಇವರು ವಚನಗಳನ್ನಲ್ಲದೆ ಕೆಲವು ಕೃತಿಗಳನ್ನೂ ರಚಿಸಿದ್ದಾರೆ.

ಅವರ ವಚನದ ಬಗ್ಗೆ ಕೆಲವು ಮಾತುಗಳು. ಬಸವಣ್ಣನವರದು ಪಾಂಡಿತ್ಯ ಪೂರ್ಣ

ವಿವರಣೆ. ಆದರೆ, ಸಿದ್ಧಲಿಂಗೇಶ್ವರರು ಪಾಮರಪೂರ್ಣ ವಿವರಣೆ. ಇವರ ವ್ಯಾಖ್ಯಾನವೂ ಬಸವಣ್ಣನವರದಷ್ಟೇ ಮನಮುಟ್ಟುವಂತಿದೆ.

ಸಿದ್ಧಲಿಂಗೇಶ್ವರ ಮೊದಲ ವಚನದಲ್ಲಿ 'ಹಾವಾಡಿಗನ ಕಾಯಕ', ಹೋಲಿಕೆಯಾಗುತ್ತದೆ. ಹಾವಾಡಿಗ ಹಾವನಾಡಿಸುವುದನ್ನು ಜನಸಾಮಾನ್ಯರು ಯಾರು ತಾನೇ ನೋಡಿರುವುದಿಲ್ಲ. ಹಾವಾಡಿಗ ಹಾವಿನಂತಹ ವಿಷಜಂತುವನ್ನು ಆಡಿಸುವಾಗ ಅದನ್ನು ಆಡಿಸುವುದಷ್ಟೇ ಮುಖ್ಯವಲ್ಲ. ಆಡಿಸುವುದರ ಬಗ್ಗೆ ಇಡುವಷ್ಟು ಗಮನವನ್ನು, ತನ್ನನ್ನು ರಕ್ಷಿಸಿಕೊಳ್ಳುವಲ್ಲಿಯೂ ಇಡಬೇಕಾಗುತ್ತದೆ. ಇಲ್ಲವಾದಲ್ಲಿ ಅಪಾಯ ಖಂಡಿತ. ಇದೇ ಸಮೀಕರಣವನ್ನು ನಾವು ಆಡುವ ಮಾತಿಗೂ ಅನ್ವಯಿಸಿರುವುದು ಎಷ್ಟು ಸೂಕ್ತವೆನಿಸಿದೆ ನೋಡಿ. ಮಾತನಾಡುವಾಗಲೂ ಹಾವಾಡಿಗನ ಎಚ್ಚರಿಕೆ ಇರಬೇಕು. ಆಡುವ ಮಾತು ಹಾವಿನಂತೆಯೇ. ನೋಡಲು ಎಷ್ಟು ಆಕರ್ಷಕವೋ, ತಾಗಿದರೆ ಅಷ್ಟೇ ಅಪಾಯಕಾರಿ. ಆದ್ದರಿಂದ ಸಿದ್ಧಲಿಂಗೇಶ್ವರರು ಎಚ್ಚರಿಸುತ್ತಾರೆ. "ಆವ ಮಾತನಾಡಿದರೂ ತನ್ನ ಕಾಯ್ದು ಆಡಬೇಕು" ತಾನು ಆಡಿದ ಮಾತು ಎಷ್ಟರಮಟ್ಟಿಗೆ ತನಗೆ ಹಿಂಬಡಿಯಬಹುದೆಂಬುದರ ಬಗ್ಗೆ ಗಮನವಿರಬೇಕು. ಹೀಗೆ ಮಾತನಾಡದಿದ್ದರೆ ಆಗುವ ಅಡ್ಡ ಪರಿಣಾಮ ಮುಂದಿನ ಸಾಲಿನಲ್ಲಿದೆ ತನ್ನ ಮಾತೇ ತನಗೆ ಹಗೆಯಾಗುವುದು. ಉಂಟಾದ ಹಗೆ-ಅದರ ಹೊಗೆ ಅನ್ಯರಿಂದ ಬರುವಂತಹುದಲ್ಲ. ಮಾತಿನಿಂದ ಅಳಿವುದು-ಉಳಿವುದು ನಮ್ಮ ಮಾತಿನಲ್ಲಿಯೇ ಇದೆ. ಹಗೆಯಾಗಲೀ ಕೆಳೆಯಾಗಲೀ ಮಾತಿನಿಂದಲ್ಲದೆ ಬೇರೆ ಇಲ್ಲ. ಹಾವಾಡಿಸುವುದು ಮಾತನಾಡುವುದು ಅವರವರಿಗೆ ಅನಿವಾರ್ಯ. ಆದರೆ ಆಡಿಸುವಲ್ಲಿ, ಆಡುವಲ್ಲಿ ಇರಬೇಕಾದ ಎಚ್ಚರ ಅತ್ಯಗತ್ಯ.

ಸಿದ್ಧಲಿಂಗೇಶ್ವರರ ಮಾತಿನ ಬಗೆಗಿನ ಮತ್ತೊಂದು ವಚನವೂ ಗಮನಾರ್ಹ. ಇಲ್ಲಿ ಮಾತನಾಡುವಿಕೆಯನ್ನು 'ಮಾತಿನ ಪಸರ' ಎಂದಿದ್ದಾರೆ. (ಪಸರ= ಮಾರಾಟಕ್ಕಾಗಿ ವಸ್ತುಗಳನ್ನು ಹರಡಿರುವ ಅಂಗಡಿ) 'ಮಾತಿನ ಅಂಗಡಿ' ಎಂಬುದೇ ಒಂದು ಅದ್ಭುತ ಕಲ್ಪನೆ! ಇಂತಹ ಅಂಗಡಿಯ ವ್ಯವಹಾರದಲ್ಲಿ ಸಿಕ್ಕಿರುವವರು ನಾವು. ಆ ವ್ಯವಹಾರವೇ ಒಂದು ತಾಕಲಾಟ, ಒಂದು ಒದ್ದಾಟ, ಒಂದು ಬಡಿದಾಟ. ಈ ಮಾತಿನ ವ್ಯವಹಾರದಲ್ಲಿ ಆಗುವ ಅನಾಹುತಗಳೆಷ್ಟೋ! ಇಂತಹ ಲೌಕಿಕ ವ್ಯವಹಾರಸ್ಥನಿಗೆ 'ಮಹದ' ಅಂದರೆ 'ಮಹಂತನ' ಮಾತೇಕೆ? ಮಹಂತನ ಆಕಾಂಕ್ಷೆ ಎಲ್ಲಿಯದು. ಮಹಂತನನ್ನು ಮುಟ್ಟುವ ಅವನ ಅವಸ್ಥೆ ಎಂತಹುದು ನೋಡಿ! 'ಕೊರಳುದ್ದಕ್ಕೆ ಹೂಳಿಸಿಕೊಂಡು, ಮುಗಿಲುದ್ದಕ್ಕೆ ನೆಗೆಯುವವನ ಹಾಗೆ' -ಎಂತಹ ನುಡಿ ಚಿತ್ರ ಇದು! ಸಿದ್ಧಲಿಂಗೇಶ್ವರರ ಇದೊಂದು ಸಾಲು ಎಷ್ಟು ವ್ಯಾಖ್ಯಾನ ಬಯಸುತ್ತಲ್ಲವೇ? ಅಷ್ಟು ಶಕ್ತಿ ಅಡಗಿದೆ ಆ ಸಾಲುಗಳಲ್ಲಿ. ಇಂತಹವನ ಮಾತಿನ ವ್ಯವಹಾರ-ಎಚ್ಚರಿಕೆಯಿಲ್ಲದೆ ಮಾತನಾಡುವವನ ಪರಿ, ಅವನ ಮಾತು ಎಲ್ಲವೂ ಬರಿ ಮಾತಿನ ಮೇಲೆ, ಮುತ್ತಿನ ಹಾರವಲ್ಲ. ಅವುಗಳಲ್ಲಿ ಯಾವುದೇ ಸತ್ವವಿಲ್ಲ. ಓಟೆ ಇಲ್ಲದ ಮಾವಿನಂತೆ – 'Seedless' ಪ್ರಪಂಚ. ಹೀಗಾಗಿ ಅಲ್ಲಮನ ಪ್ರಕಾರ 'ನುಡಿದು ಸೂತಕಿ'ಗಳಾಗಬಾರದು. ಮಾತಿನಲ್ಲಿ ಮೌಲ್ಯವಿರಬೇಕು. ಆಗ ತಾನೆ ಅದರಲ್ಲಿರುವ ಓಟೆ, ಪರರ ಮನಸ್ಸಿನಲ್ಲಿ ನಾಟಿ, ಮರವಾಗಿ ಬೆಳೆಯುತ್ತದೆ. ಮಹದ ಅರಿವನ್ನು ಮೂಡಿಸುತ್ತದೆ.

ಇದೇ ನಿಟ್ಟಿನಲ್ಲಿ ಚಿಂತನಾರ್ಹವಾದ ಮತ್ತೆ ಕೆಲವು ವಚನಗಳೂ ಉಂಟು. ಹಡಪದ ಅಪ್ಪಣ್ಣಗಳ 'ಮಾತನರಿದಂಗೆ ಮಥನದ ಹಂಗೇಕೋ'; ತೋಂಟದ ಸಿದ್ಧಲಿಂಗ ಶಿವಯೋಗಿಗಳ 'ಮಾತಿನಲ್ಲಿ ಮಹತ್ವವ ನುಡಿದು' ; ಅಲ್ಲಮರ ಮಾತೆಂಬುದು ಜ್ಯೋತಿರ್ಲಿಂಗ – ಎಂಬ ವಚನಗಳನ್ನು ನೋಡಿ! ಮತ್ತು ಮಾತನಾಡಿ!!

■



# ವಚನಕಾರ್ತಿ ಮುಕ್ತಾಯಕ್ಕ

**ಪ್ರೊ.ಎಸ್. ಬಸವರಾಜು**

ಹನ್ನೆರಡನೆಯ ಶತಮಾನದ ವಚನಕಾರ್ತಿಯರಲ್ಲಿ ವಿಶಿಷ್ಟಳಾದ ಮುಕ್ತಾಯಕ್ಕ ಹಿರಿಯ ಅನುಭಾವಿಯಾದ ಅಲ್ಲಪ್ರಭುವನ್ನೇ ತನ್ನ ದಿಟ್ಟ ನುಡಿಗಳಿಂದ ಪ್ರಶ್ನಿಸಿ, ಪರೀಕ್ಷಿಸಿ, ಆತನ ಅನುಭಾವದ ನಿಲುವನ್ನು ಕಂಡು ಮಣಿಯುವ ಈಕೆ ಪ್ರಖರವಾದ ಬೌದ್ಧಿಕತೆಗೆ, ವೈಚಾರಿಕತೆಗೆ ಒಂದು ಸಂಕೇತವಾಗಿದ್ದಾಳೆ.

ಮುಕ್ತಾಯಕ್ಕ ಗುಪ್ತಭಕ್ತ ಅಜಗಣ್ಣನ ತಂಗಿ. ಅಜಗಣ್ಣನನ್ನು ಎಲ್ಲ ವಚನಕಾರರು ಐಕ್ಯಸ್ಥಿತಿಗೆ ಉದಾಹರಣೆಯಾಗಿ ಹೆಸರಿಸುವುದರಿಂದ, ಅವನು ದೊಡ್ಡ ಅನುಭಾವಿಯಾಗಿದ್ದನೆಂದು ಹೇಳಬಹುದು. 'ಅಜಗಣ್ಣ' 'ಅಜಗಣ್ಣತಂದೆ' ಎಂದು ತನ್ನ ಅಣ್ಣನ ಹೆಸರನ್ನೇ ಅಂಕಿತವಾಗಿಟ್ಟು ಕೊಂಡಿರುವ ಮುಕ್ತಾಯಕ್ಕನ ೩೭ ವಚನಗಳು ಸಮಗ್ರ ವಚನ ಸಂಪುಟದಲ್ಲಿ ಅಚ್ಚಾಗಿದೆ. ಮುಕ್ತಾಯಕ್ಕ ಮತ್ತು ಅಜಗಣ್ಣನ ಬದುಕಿನ ಕೆಲವು ವಿವರಗಳು ಶೂನ್ಯ ಸಂಪಾದನೆಗಳು, ಗುರುರಾಜ ಚಾರಿತ್ರ, ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ ಮುಂತಾದ ಗ್ರಂಥಗಳಲ್ಲಿ ದೊರೆಯುತ್ತವೆ.

ಮುಕ್ತಾಯಕ್ಕನ ತವರೂರು ಗದಗದ ಸಮೀಪದ ಲಕ್ಕುಂಡಿ. ಗಂಡನ ಊರು ರಾಯಚೂರು ಜಿಲ್ಲೆಯ ಮಸಳಿಕಲ್ಲು. ಒಮ್ಮೆ ಈಕೆಯ ಅಣ್ಣ ಅಜಗಣ್ಣ ಮಕ್ಕಳೊಂದಿಗೆ ಆಟವಾಡುತ್ತಿರುವಾಗ, ಅವನ ಮುಗ್ಧತೆಯನ್ನು ಕಂಡು ಮಕ್ಕಳು ವಿನೋದದಿಂದ 'ಬೆಲ್ಲವನ್ನು ಕೊಡುತ್ತೇವೆ, ಲಿಂಗವನ್ನು ಕೊಡು' ಎಂದು ಕಾಡಲು, ಆ ಉಪಟಳವನ್ನು ಸಹಿಸಲಾರದೆ, ಅವನು ತನ್ನ ಇಷ್ಟಲಿಂಗವನ್ನು ನುಂಗಿಬಿಡುತ್ತಾನೆ. "ಹಾವೊಂದು ತನ್ನ ಹೆಡೆಯ ರತ್ನವನ್ನು ಉಗುಳಿ, ಅದರ ಬೆಳಕಿನಲ್ಲಿ ಆಹಾರವನ್ನು ಹುಡುಕಿ ಸೇವಿಸಿ ಬಳಿಕ ಆ ರತ್ನವನ್ನು ನುಂಗಿ ಹರಿದು ಹೋದ ಸಂದರ್ಭವನ್ನು ಕಂಡು, ಅಜಗಣ್ಣ ತಾನೂ ಹಾಗೆಯೇ ಇಷ್ಟಲಿಂಗವನ್ನು ರಕ್ಷಿಸುವ ಸಲುವಾಗಿ ನುಂಗಿಬಿಡುತ್ತಾನೆಂದು" ಗುರುರಾಜ ಚಾರಿತ್ರದಲ್ಲಿ ಉಲ್ಲೇಖವಾಗಿದೆ.

ಇಷ್ಟಲಿಂಗವನ್ನು ನುಂಗಿದ ಅಜಗಣ್ಣನನ್ನು ಮುಕ್ತಾಯಕ್ಕ ಮನೆಗೆ ಕರೆ ತಂದಾಗ ಅವರ ತಂದೆ-ತಾಯಿ ಲಿಂಗವಿಲ್ಲದ ಮಗನನ್ನು ಮನೆಯಿಂದ ಹೊರಹಾಕುತ್ತಾರೆ. ಆಗ ಅವರು ತಮ್ಮ ಸೋದರ ಮಾವನ ಮನೆಯಲ್ಲಿ ಆಶ್ರಯವನ್ನು ಪಡೆಯುತ್ತಾರೆ. ಕೆಲಕಾಲದ ನಂತರ ಸೋದರ ಮಾವನ ಮಗಳೊಂದಿಗೆ ಅಜಗಣ್ಣನ ಮದುವೆ ನಡೆಯುತ್ತದೆ. ಮುಕ್ತಾಯಕ್ಕನಿಗೂ ಮದುವೆಯಾಗಿ ಗಂಡನ ಮನೆಗೆ ಹೊರಟು ನಿಂತ ಸಂದರ್ಭದಲ್ಲಿ ತನ್ನ ಅಣ್ಣನ ಅವಸಾನದ ಕುರುಹು ಕೇಳುತ್ತಾಳೆ. ಅದಕ್ಕೆ ಅಜಗಣ್ಣ "ನಿನ್ನ ಹಿತ್ತಲಲ್ಲಿ ಒಂದು ಮಲ್ಲಿಗೆ ಗಿಡವನ್ನು ಬೆಳಸು. ಅದು ಒಣಗಿದಾಗ ನನ್ನ ಅವಸಾನವೆಂದು ತಿಳಿ" ಎಂದು ಹೇಳುತ್ತಾನೆ. ಅಜಗಣ್ಣನ ಹೆಂಡತಿಗೆ ತಾನು ಭವಿಯ ಹೆಂಡತಿಯಾದೆನಲ್ಲಾ ಎಂಬ ಕೊರಗು ಒಳಗೊಳಗೆ ಕಾಡುತ್ತಿರುತ್ತದೆ. ಒಂದು ಸಲ ಅಜಗಣ್ಣನಿಗೆ ತನ್ನ ಪೂರ್ವಸ್ಥಿತಿಯೆಲ್ಲ ನೆನಪಿಗೆ ಬಂದು ಯೋಚಿಸುತ್ತಾ ಅನ್ಯಮನಸ್ಕನಾಗಿ ಮನೆಯನ್ನು ಪ್ರವೇಶಿಸುವಾಗ, ಅವನ ಹಣೆ ಬಾಗಿಲುವಾದಕ್ಕೆ ಬಡಿದು ಅಕಾಲ ಮರಣ ಹೊಂದುತ್ತಾನೆ. ಆದರೆ ಇದು ಒಳಗೊಳಗೆ ಸಾಧನೆ ಬಲಿತ ಲಿಂಗೈಕ್ಯ ಸ್ಥಿತಿ. ಅತ್ತ ಮುಕ್ತಾಯಕ್ಕನಿಗೆ – ಹಿತ್ತಿಲ ಮಲ್ಲಿಗೆ ಬಳ್ಳಿ ಬಾಡಿ ಹೋಗಲು – ಅದು ತನ್ನ ಅಣ್ಣನ ಅವಸಾನವೆಂದು ತಿಳಿದು,

ಅವನಿಗಾಗಿ ಆಕೆ ಬಹುವಾಗಿ ಶೋಕಿಸುತ್ತಾಳೆ. ಆಗ ಆಕೆಯ ಬಳಿಗೆ ಅಲ್ಲಮಪ್ರಭು ಬರುತ್ತಾನೆ. ಆಕೆಯನ್ನು ಸಮಾಧಾನಪಡಿಸಲು ಪ್ರಯತ್ನಿಸುತ್ತಾನೆ. ಈ ಪ್ರಸಂಗ ಶೂನ್ಯಸಂಪಾದನೆಯಲ್ಲಿ ವಿಸ್ತಾರವಾಗಿ ಬಂದಿದೆ. ಬದುಕಿನ ಕ್ಷಣಿಕತೆ, ಅರಿವು-ಅನುಭಾವಗಳಿಗೆ ಸಂಬಂಧಿಸಿದಂತೆ ಅಲ್ಲಮಪ್ರಭು ಅನೇಕ ಪ್ರಶ್ನೆಗಳನ್ನು ಹಾಕುತ್ತಾನೆ. ಮುಕ್ತಾಯಕ್ಕ ಅವನ ಪ್ರಶ್ನೆಗಳಿಗೆ ಅಷ್ಟೇ ದಿಟ್ಟ ಉತ್ತರಗಳನ್ನು ಕೊಡುತ್ತಾಳೆ. "ಗುರುವಿನ ಮಾರ್ಗದರ್ಶನವಿಲ್ಲದೆ ಅರಿವು ಸಾಧ್ಯವಿಲ್ಲ. ಗುರುವಾದವನು ಅಜಗಣ್ಣನಂತೆ ಮೌನಿಯಾಗಿರಬೇಕು ಎಂಬುದು ಮುಕ್ತಾಯಕ್ಕನ ನಿಲುವು. ಗುರು ಹಾಗೆ ವ್ಯಕ್ತಿಯಾಗಿರುವುದು ಸಾಧ್ಯವಿಲ್ಲ. ಗುರು ಎನ್ನುವುದು ಒಂದು ತತ್ತ್ವ, ಸಾಧಕನಾದವನು ಅದನ್ನು ತನ್ನೊಳಗೇ ಕಂಡುಕೊಳ್ಳಬೇಕು ಎಂದು ಹೇಳಿ ಮುಕ್ತಾಯಕ್ಕನ ಮಿತಿಗಳನ್ನು ತೋರಿಸಿಕೊಡುತ್ತಾನೆ".

ಅಜಗಣ್ಣ ಪ್ರಸಿದ್ಧ ವಚನಕಾರನೂ ಹೌದು. ಅದಕ್ಕೆ ಚೆನ್ನಬಸವಣ್ಣನ ಈ ವಚನ ಸಾಕ್ಷಿಯಾಗಿದೆ.

**"ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ,**
**ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ,**
**ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ,**
**ಅಜಗಣ್ಣನ ಐದು ವಚನಕ್ಕೆ ಮಹದೇವಿಯಕ್ಕನ ಒಂದು ವಚನ**
**ನಿರ್ವಚನ ಕಾಣಾ ಕೂಡಲ ಚೆನ್ನಸಂಗಮದೇವಾ"**

ಡಾ.ಎಂ. ಚಿದಾನಂದಮೂರ್ತಿಯವರು ಮತ್ತು ಶ್ರೀ ಎಸ್. ಶಿವಣ್ಣನವರು 'ಅಜಗಣ್ಣನ ವಚನಗಳ ಅಭಿಜ್ಞೆ' ಎಂಬ ತಮ್ಮ ಲೇಖನದಲ್ಲಿ 'ಮಹಾಘನ ಸೋಮೇಶ್ವರ' ಎಂಬುದು ಅಜಗಣ್ಣನ ಅಂಕಿತವೆಂದು ಸಾಧಿಸಿ, ಅವನ ಐದು ವಚನಗಳನ್ನು ಗುರುತಿಸಿದ್ದಾರೆ. ವಿಶೇಷವೆಂದರೆ ಲಕ್ಕುಂಡಿಯಲ್ಲಿ ಪ್ರಾಚೀನವಾದ ಸೋಮೇಶ್ವರ ದೇವಾಲಯವಿರುವುದು ಇಲ್ಲಿ ಉಲ್ಲೇಖಾರ್ಹವಾದುದು.

ತನ್ನ ವ್ಯಕ್ತಿತ್ವ – ಅನುಭಾವಗಳ ಹಿನ್ನೆಲೆಯಲ್ಲಿ ಸಾಧಕನಾದವನ ಸ್ಥಿತಿಯನ್ನು ಮುಕ್ತಾಯಕ್ಕ ಹೇಳುವುದು ಹೀಗೆ –

**"ಅಂಧಕನ ಕೈಯ ಅಂಧಕ ಹಿಡಿದಂತಿರಬೇಕು**
**ಮೂಗನ ಕೈಯಲ್ಲಿ ಕಾವ್ಯವ ಕೇಳಿದಂತಿರಬೇಕು**
**ದರ್ಪಣದೊಳಗಣ ಪ್ರತಿಬಿಂಬದಂತೆ**
**ಹಿಡಿವರಿಗಳವಲ್ಲದಿರಬೇಕು ಅಣ್ಣಾ.**
**ಕೂರ್ಮನೆ ಶಿಶುವಿನ ಸ್ನೇಹದಂತೆ ಇರಲೊಲ್ಲದೆ**
**ಆರೂಢಗೆಟ್ಟೆಯೊ ಅಜಗಣ್ಣಾ"**

'ಕುರುಡನ ಕೈಯ ಕುರುಡ ಹಿಡಿದಂತೆ. ಮೂಗನ ಕೈಯಲ್ಲಿ ಕಾವ್ಯವನ್ನು ಕೇಳಿದಂತೆ'– ಎನ್ನುವಲ್ಲಿ ವೈರುಧ್ಯ ತೋರಿದರೂ, ಇದು ಲೌಕಿಕಕ್ಕೆ ಅತೀತವಾದ ಸ್ಥಿತಿಯನ್ನು ಸಾಂಕೇತಿಸುತ್ತದೆ. ವಸ್ತುವಿನ ಪ್ರತಿಬಿಂಬಕ್ಕೆ 'ದರ್ಪಣ' ಅಂದರೆ ಕನ್ನಡಿಯ ಹೊರತಾಗಿ ಪ್ರತ್ಯೇಕ ಅಸ್ತಿತ್ವವಿಲ್ಲ. ಪ್ರತಿಬಿಂಬ ದರ್ಪಣದ ಒಂದು ಭಾವ. ಹಾಗೆಯೇ ಭಕ್ತಿ-ಅನುಭಾವವೆನ್ನುವುದು ಬೇರ್ಪಡಿಸಲಾಗದೆ, ಅಂತರಂಗದ ಒಂದು ಭಾವ. ಇಲ್ಲಿನ 'ಕೂರ್ಮನ ಶಿಶುವಿನ ಸ್ನೇಹದಂತೆ' ಎಂಬ ಮಾತು ಮನನೀಯವಾಗಿದೆ. ಆಮೆಯ ಮರಿ ಹೊರಚಾಚಿದ ಅಂಗಗಳನ್ನು ತನ್ನ



ಚಿಪ್ಪಿನಲ್ಲಿ ಸೇರಿಸಿಕೊಳ್ಳುವಂತೆ ಭಕ್ತಿ-ಅನುಭಾವವೆನ್ನುವುದು ಹೊರಗೆ ತೋರಿಸಲು ಆಗದ ಅಂತರಂಗದ ಪರಿಭಾವನೆಯಲ್ಲಿ ಪರಿಣತವಾಗುವಂಥದು.

**"ಅರಿವನಣಲೊಳಗಿಕ್ಕಿ ಅಗಿವುತ್ತಿದೆ ಮರ್ತ್ಯಲೋಕವೆಲ್ಲವು**
**ಅರಿವು ಉಳಿಯಲರಿಯದೆ ಕೆಟ್ಟಿತ್ತು ಲೋಕವೆಲ್ಲವು"** ಎಂಬ ಮಾತಿನಲ್ಲಿ ಮುಕ್ತಾಯಕ್ಕ

ಮರ್ತ್ಯದ ದುರಂತವನ್ನು ಕಂಡು ಮರುಗಿದ್ದಾಳೆ. ಲೋಕದ ಜನ ಜ್ಞಾನವನ್ನು ದವಡೆಯಲ್ಲೇ ಇಟ್ಟುಕೊಂಡು ಬಾಯಿಯನ್ನು ಆಡಿಸುತ್ತಿದ್ದಾರೆ. ಅದು ಅಗಿಯುವುದರ ಭಾಗವಾಗುತ್ತಿಲ್ಲ, ಅಗಿಯುವುದು ತಪ್ಪಿಲ್ಲ, ಹಸಿವು ಇಂಗಿಲ್ಲ, ಮನುಷ್ಯ ತನ್ನ ಬುದ್ಧಿ ಗ್ರಹಿಸಿದ್ದನ್ನು ಅನುಭವದಿಂದ ಕಂಡುಕೊಂಡ ಸತ್ಯಗಳನ್ನು, ಬದುಕಿಗೆ ಅನ್ವಯಿಸಿಕೊಳ್ಳದೇ ಹೋದರೆ ಅವನ ಜೀವನ ದುರಂತದ ಹಾದಿ ಹಿಡಿಯುತ್ತದೆ ಎಂಬುದನ್ನು ಮುಕ್ತಾಯಕ್ಕ ಸೂತ್ರರೂಪದಲ್ಲಿ ಪರಿಣಾಮಕಾರಿಯಾಗಿ ಹೇಳಿದ್ದಾಳೆ.

ಮುಕ್ತಾಯಕ್ಕನ ಅಣ್ಣ ಅಜಗಣ್ಣ ಅವಳ ಬದುಕಿನ ಒಳ-ಹೊರಗುಗಳನ್ನು ತುಂಬಿರುವ ಒಂದು ತತ್ತ್ವ "ತತ್ತ್ವವೆಲ್ಲಕ್ಕಧಿಕವಾಗಿಪ್ಪಾತನು ಅಜಗಣ್ಣನೆ, ಮಹಾತತ್ತ್ವವು ಅಜಗಣ್ಣನೆ, ಶ್ರೀ ಗುರುತತ್ತ್ವವು ಅಜಗಣ್ಣನೆ, ಪರತತ್ತ್ವವು ಅಜಗಣ್ಣನೆ". ಅಂಥ ತನ್ನ ಅಣ್ಣ ಬದುಕಿರುವಾಗ ಅವನಿಂದ ಮಾರ್ಗದಶ್ನವನ್ನು ಪಡೆಯಲಿಲ್ಲವೆಂಬ ಆಧ್ಯಾತ್ಮಿಕ ವಾತ್ಸಲ್ಯದಿಂದ ಪ್ರೇರಿತವಾದ ಕೊರಗಿನಲ್ಲಿ ಆಕೆ ದುಃಖಿಸುತ್ತಾಳೆ.

**"ಕತ್ತಲೆ ಬೆಳಗ ಕಾಂಬ ಸಂದೇಹಿ ನಾನೊಬ್ಬಳು**
**ಎನ್ನ ಕಣ್ಣ ಕಟ್ಟಿ ಕನ್ನಡಿಯ ತೋರಿತ್ತೊ ಅಜಗಣ್ಣಾ ನಿನ್ನ ಯೋಗ"**

ಅಂತರಂಗದ ಕತ್ತಲೆಯಲ್ಲಿರುವ ಆಕೆಗೆ ಬೆಳಗನ್ನು ಕಾಣುವುದೇ ಸಂದೇಹವಾಗಿದೆ. ಅಜಗಣ್ಣ ಇಲ್ಲದ ಆಕೆಯ ಸ್ಥಿತಿ ಕಣ್ಣ ಕಟ್ಟಿ ಕನ್ನಡಿಯ ತೋರಿದಂತಾಗಿದೆ.

ಮುಕ್ತಾಯಕ್ಕನ ದೃಷ್ಟಿಯಲ್ಲಿ ಅನುಭಾವದ ಔನ್ನತ್ಯವೆನ್ನುವುದು ಶಬ್ದಮುಗ್ಧವಾಗಿರಬೇಕಲ್ಲದೆ, ಶಬ್ದ ಸಂದಣಿಯ ಮಾತಾಗಬಾರದು. "ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬವರು ಶಿಶು ಕಂಡ ಕನಸಿನಂತಿರಬೇಕು". ಮಗು ಕನಸು ಕಾಣುತ್ತದೆ. ಆ ಕನಸಿನ ಅನುಭವದ ಸುಖವನ್ನೂ ಸವಿಯುತ್ತದೆ. ಆದರೆ ಅದನ್ನು ಇತರರಿಗೆ ಮಾತಿನಲ್ಲಿ ಹೇಳಲಾರದು. ಅಜಗಣ್ಣನ ಗುಪ್ತಭಕ್ತಿಯೋಗ ಅಂಥದು ಮಾತಿಗೆ ಅತೀತವಾದುದು ಎಂಬುದು ಮುಕ್ತಾಯಕ್ಕನ ನಿಲುವು.

ಮುಕ್ತಾಯಕ್ಕ ದಿಟ್ಟತನಕ್ಕೆ ಹೆಸರಾದವಳು. "ಉಟ್ಟುದ ತೊರೆದವಂಗೆ ಊರೇನು, ಕಾಡೇನು?" ಇಂಥ ಮಾತುಗಳಲ್ಲಿ ಅದನ್ನು ಗುರುತಿಸಬಹುದು. ಹಾಗೆಯೇ ಆಕೆಯ ವಚನಗಳಲ್ಲಿ ಅನುಭಾವದ ಉನ್ನತಿಯನ್ನು ಸೂಚಿಸುವ ಬೆಡಗಿನ ನಡೆಯನ್ನು ಕಾಣಬಹುದು. ಉದಾಹರಣೆಗೆ :

**"ವಾರಿಕಲ್ಲ ಕೊಡನಲ್ಲಿ ಮುತ್ತು ಮಾಣಿಕವ ತುಂಬಿ,**
**ಎತ್ತುವರಿಲ್ಲದೆ ಸಖಿಯನರಸುತಿಪ್ಪೆ"** ॥೧॥
**"ನೀರ ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ**
**ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ"** ॥೨॥
**"ಜಲದ ಚಿತ್ತಾರವ ಕೊರಳಿನಲ್ಲಿ**
**ಹಾರವಿಲ್ಲದ ಮುತ್ತಿನ ಸರವು ನೋಡಾ"** ॥೩॥

ಒಟ್ಟಿನಲ್ಲಿ ವಚಕನಾರ್ತಿಯಾಗಿ "ಮುಕ್ತಾಯಕ್ಕನಿಗೆ ಭಾಷೆಯ ಸಾಧ್ಯತೆಗಳು ತಿಳಿದಿವೆ.

ಅವಳ ಆಲೋಚನೆಯಷ್ಟೇ ಅವಳ ಭಾಷೆಯೂ ಸ್ಫಟಿಕದಂತೆ ಸ್ವಚ್ಛ, ಕತ್ತಿಯಂತೆ ತೆಳು, ಆದರೆ ಹರಿತ. ಅವಳ ವಚನಗಳಲ್ಲಿ ಆಲೋಚನೆ ಮುಖ್ಯವಾಗಿ ಕಾವ್ಯತ್ವ ಅದಕ್ಕೆ ಪೋಷಕವಾಗಿದೆ. 'ವಾಯುವನುಟ್ಟನೇಕವ್ವಾ?' 'ತೊರೆಯ ಕಟ್ಟೆಯ ಕಟ್ಟಿ ನಿಲಿಸಲುಬಹುದೆ?', 'ಮೂಗನ ಕೈಯಲ್ಲಿ ಕಾವ್ಯವ ಕೇಳಿದಂತಿರಬೇಕು", 'ಉಟ್ಟುದ ತೊರೆದವಂಗೆ ಊರೇನು ಕಾಡೇನು?', 'ಸಿಡಿಲು ಹೊಯ್ದ ಬಾವಿಗೆ ಸೋಪಾನವೇಕೋ?' – ಇಲ್ಲಿಯ ಮಾತುಗಳಲ್ಲಿ ಬರುವ ರಚನೆಯ ಸೊಗಸು, ಆಲೋಚನೆಯ ಗಹನತೆ ಪರಿಭಾವನೆಗೆ ತಕ್ಕುವಾಗಿವೆ.


**ಪರಾಮರ್ಶನ ಗ್ರಂಥಗಳು.**

೧. ಶಿವಗಣಪ್ರಸಾದಿ ಮಹಾದೇವಯ್ಯನ ಪ್ರಭುದೇವರ ಶೂನ್ಯ ಸಂಪಾದನೆ : ಸಂ.ಡಾ.ಎಲ್. ಬಸವರಾಜು

೨. ಸಮಗ್ರ ವಚನ ಸಂಪುಟ (ಪ್ರಥಮ ಆವೃತ್ತಿ ೧೯೯೩) : ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ, ಬೆಂಗಳೂರು

೩. ಶೂನ್ಯ ಸಂಪಾದನೆಯನ್ನು ಕುರಿತು (೧೯೮೮) : ಡಾ. ಎಂ. ಚಿದಾನಂದಮೂರ್ತಿ

೪. ವಚನಸಾಹಿತ್ಯ (೧೯೭೫) : ಡಾ. ಎಂ. ಚಿದಾನಂದಮೂರ್ತಿ

೫. ಶೂನ್ಯ ಸಂಪಾದನೆಗಳು : ಸಾಂಸ್ಕೃತಿಕ ಮುಖಾಮುಖಿ (೨೦೦೨) : ಕನ್ನಡ ವಿಶ್ವವಿದ್ಯಾಲಯ, ಹಂಪಿ.

೬. ಶೂನ್ಯ ಸಂಪಾದನೆ : ವಿವರಣಾತ್ಮಕ ಪರಿಚಯ (೧೯೮೮) : ಡಾ. ಎಚ್. ತಿಪ್ಪೇರುದ್ರಸ್ವಾಮಿ.


ಒಂದು ಬಿದಿರಿಂಗೆ ಕವೆ ಮೂರು, ಆ ಕವೆಯ ಒಳಗೆ ಲಕ್ಕ ಸಿಬಿರು
ಮೂರು ಕವೆಯ ಕೊಚ್ಚಿಸಿ, ಬಿಲ್ಲ ಸಿಕ್ಕ ಬಿಡಿಸಿ, ಸೀಳಿದ ಬಿದಿರ
ನೆರೆಹೊರೆಯಲ್ಲಿ ನೆಯಿದೆ, ತೊಟ್ಟಿಲ ಸಂದ ಕಾಣದಂತೆ
ನಾಲ್ಕು ಕಾಲ ನಿಕ್ಕಿ
ಅಂದ ಅಂದವಾದ ತೊಟ್ಟಿಲ ದಂಡೆಯ ನಿಕ್ಕಿ
ಕಟ್ಟುವದಕ್ಕೆ ಶ್ರುತ ದೃಷ್ಟವೆಂಬೆರಡು, ದಾರದಲ್ಲಿ ತೊಟ್ಟಿಲಕಟ್ಟಿ
ಗವರೇಶ್ವರ ಲಿಂಗಕ್ಕೆ ಹುಟ್ಟುಗೆಟ್ಟು ಹೋಗೊ
ಎಂದು ಜೋಗುಳವಾಡಿದೆ.

**ಮೇದರ ಕೇತಯ್ಯ**





# ವಚನ ಸಾಹಿತ್ಯದಲ್ಲಿ ಅಕ್ಕಮಹಾದೇವಿ

**ಡಾ. ವಜ್ರೇಶ್ವರಿ ಎಸ್. ಮೂರ್ತಿ**

ಕನ್ನಡ ಸಾಹಿತ್ಯದಲ್ಲಿ ವಚನ ಸಾಹಿತ್ಯ ತನ್ನದೇ ಆದ ಹೆಗ್ಗಳಿಕೆಯ ಸ್ಥಾನ ಗಳಿಸಿಕೊಂಡಿದೆ. ಸಾಹಿತ್ಯವನ್ನು ಸುಲಭೀಕರಿಸಿ ಶ್ರೀ ಸಾಮಾನ್ಯರೆಡೆಗೆ ಕೊಂಡೊಯ್ದ ಕೀರ್ತಿ ಶಿವಶರಣರಿಗೆ ವಿಶೇಷವಾಗಿ ಸಲ್ಲುತ್ತದೆ. ವಚನಕಾರರು ನೇರ, ಸರಳ, ನಿರ್ಭಿಡೆ, ನಿಷ್ಠೆ ಭಕ್ತಿ, ಮೌಲ್ಯ ಆದರ್ಶಗಳನ್ನು ಎಲ್ಲರ ಹೃದಯಗಳಲ್ಲೂ ನಾಟುವಂತೆ ಮಾಡುತ್ತಾರೆ. ಅಂತಹ ಅದ್ಭುತವಾದ ಚೈತನ್ಯ ವಚನಗಳಲ್ಲಿ ಅಡಗಿದೆ.

ಸಮಾಜದಲ್ಲಿ ೧೨ನೇ ಶತಮಾನದ ವಚನಸಾಹಿತ್ಯ ಒಂದು ಪ್ರಮುಖ ಭಕ್ತಿ ಚಳವಳಿಯೂ ಹೌದು; ಕ್ರಾಂತಿಯ ಯುಗವೂ ಹೌದು. ಚರಿತ್ರೆಯಲ್ಲಿ ಮಹಿಳೆಯ ಶೋಷಣೆಯು ಶಾಪವಾಗಿ ಪುರುಷ ಪ್ರಧಾನ ವ್ಯವಸ್ಥೆಯಲ್ಲಿ ನೋವಿಗೆ ಒಳಗಾಗಿರುವ ಸಂದರ್ಭದಲ್ಲಿ ಅಕ್ಕಮಹಾದೇವಿ ಯಂತಹ ಸ್ತ್ರೀಶಕ್ತಿ ಆ ಪುರುಷ ಪ್ರಧಾನ ವ್ಯವಸ್ಥೆಯನ್ನು ಕೆಡವಿ ಹೊಸ ಮುನ್ನುಡಿಯನ್ನು ಬರೆಯುವಂತೆ ಸ್ತ್ರೀ ವಿಮೋಚನೆಗೂ ಸಾಕ್ಷಿಯಾದದ್ದು ಐತಿಹಾಸಿಕ ಸತ್ಯ. ಸ್ತ್ರೀ ವಿಮೋಚನೆಗೆ ಸಮರ್ಥವಾಗಿ ಆಕೆ ಬಳಕೆ ಮಾಡಿಕೊಂಡ ಮಾಧ್ಯಮವೇ ಭಕ್ತಿ ಮತ್ತು ಬರೆವಣಿಗೆ. ಸ್ವಾನುಭವಕ್ಕೆ ಜ್ಞಾನ ಮತ್ತು ಮನೋಸ್ಥೈರ್ಯದ ಲೇಪನವನ್ನು ಮಾಡಿದ ಅನೇಕ ವಚನಕಾರ್ತಿಯರಲ್ಲಿ ಅಕ್ಕಮಹಾದೇವಿ ಮೊದಲಿಗಳು. ಹೆಣ್ಣಿನ ಆಕಾಂಕ್ಷೆ, ಒಳಮನಸ್ಸು, ತುಮುಲಗಳನ್ನು ಬಹಿರಂಗವಾಗಿ ಅಭಿವ್ಯಕ್ತಪಡಿಸುವ ಅವಳ ದಿಟ್ಟತನವನ್ನು ಗಮನಿಸಿದರೆ ಹಲವರು ವ್ಯಕ್ತಿತ್ವ ನಿರ್ಮಾಣ ಮಾಡಿಕೊಳ್ಳಲು ದಾರಿದೀಪವಾಗಿದ್ದಾಳೆ. ಬಸವಣ್ಣ, ಪ್ರಭುದೇವರ ಸಮಕಾಲೀನಳಾದ ಅಕ್ಕ ಅನುಭವ ಮಂಟಪದಲ್ಲಿ ವಿಶೇಷ ಸ್ಥಾನಮಾನ ಪಡೆದು ಅನುಭಾವಗಳ ನುಡಿತೋರಣಗಳನ್ನು ವಚನದ ಮೂಲಕ ನೀಡಿದರು.

ಉಡುತಡಿಯಲ್ಲಿ ಶ್ರೇಷ್ಠ ಶಿವಭಕ್ತರಾದ ಶಿವಭಕ್ತ–ಶಿವಭಕ್ತೆಯೆಂಬ ದಂಪತಿಗಳು ಮಕ್ಕಳಿಲ್ಲದ ಕೊರಗಿನಿಂದ ಪಾರ್ವತಿಯ ಸನ್ನಿಧಾನದಲ್ಲಿ ನಿಂತು ಓರ್ವ ಸುಪುತ್ರಿಯನ್ನು ಕರುಣಿಸಬೇಕೆಂದು ಮೊರೆ ಹೋದರು. ಆದಾಗಲೇ ಕೈಲಾಸದಲ್ಲಿ ಗುಪ್ತಗಣನಾದ ಶಿವಭಕ್ತನೊಬ್ಬನನ್ನು ಭವಿಯೆಂದು ನಿಂದಿಸಿದ ರುದ್ರಕನ್ನಿಕೆಗೆ ಪಾರ್ವತಿಯು ಭಕ್ತರ ಮನೆಯಲ್ಲಿ ಹುಟ್ಟಿ, ಭವಿಯ ಕೈ ಹಿಡಿಯುವಂತೆ ಆದೇಶ ನೀಡಿದ್ದರು. ಅದರಂತೆ ಭೂಲೋಕದಲ್ಲಿ ಶಿವಭಕ್ತರಿಗೆ ಮಗಳಾಗಿ ಹುಟ್ಟಿ ಅಪಾರ ಜ್ಞಾನ, ಯೋಗ ಸಂಪತ್ತಿನಿಂದ ಕೂಡಿದ ಶಿವಭಕ್ತಯುಕ್ತಳಾದಳು. ಒಮ್ಮೆ ಆ ಊರಿನ ಮಹಾರಾಜನಾದ ಕೌಶಿಕನು ಇವಳ ಸೌಂದರ್ಯಕ್ಕೆ ಮಾರುಹೋಗಿ ತನ್ನ ವಿರಹವೇದನೆಯನ್ನು ಮಂತ್ರಿಗಳಲ್ಲಿ ನಿವೇದಿಸಿ, ಅವಳನ್ನು ಅರಮನೆಯ ರಾಣಿಯಾಗಿ ತರುವ ತನ್ನ ಆಕಾಂಕ್ಷೆಯನ್ನು ವ್ಯಕ್ತಪಡಿಸಿ ಕಳುಹಿಸಿದನು. ಆದರೆ ಮಹಾದೇವಿ ಭವಿಗೆ ಸತಿಯಾಗಲಾರೆ ಎಂಬ ತನ್ನ ಮನಸಿಚ್ಛೆಯನ್ನು ತಿಳಿಸಿಕಳಿಸಿದಳು. ಅಲ್ಲಿ ಈ ವಿಷಯವನ್ನು ಕೇಳಿದ ಕೌಶಿಕನು ಮೂರ್ಛೆಹೊಂದಿ ಆ ಮಹಾದೇವಿ ತನಗೆ ಬೇಕೆ ಬೇಕು, ಇಲ್ಲದಿದ್ದರೆ ನಾನು ಉಳಿಯಲಾರೆ, ತನ್ನ ಮನಸ್ಸಿನ ಇಂಗಿತವನ್ನು ತಿಳಿಸಿ ಅವರು ಒಪ್ಪದಿದ್ದರೆ ಕಠಿಣಕ್ರಮಗಳನ್ನು ಕೈಗೊಳ್ಳುವ ಆಜ್ಞೆಯನ್ನು ಹೊರಡಿಸಿ ಕಳುಹಿಸಿದನು.

ಅದರಂತೆ ಮಂತ್ರಿವರ್ಯರು ರಾಜನ ಕ್ರೂರ ಆಜ್ಞೆಗಳನ್ನು ಹೇಳಿ ಹೆದರಿಸಿದರು.

ಆತಂಕಕ್ಕೊಳಗಾದ ತಂದೆ ತಾಯಿಗಳನ್ನು ಸಮಾಧಾನ ಪಡಿಸಿದ ಮಹಾದೇವಿ ನಾನು ಸದಾ ಗುರು–ಲಿಂಗ–ಜಂಗಮ ಸೇವೆಯಲ್ಲಿ ನಿರತಳಾಗಿರುವಂತೆ ತನಗೆ ಒಪ್ಪಿಗೆ ನೀಡಬೇಕು, ಅವನು ಮಾಡುವ ಮೂರು ತಪ್ಪುಗಳನ್ನು ನಾನು ಕ್ಷಮಿಸುತ್ತೇನೆ, ಅನಂತರ ಕ್ಷಮಿಸುವುದಿಲ್ಲ ಎಂಬ ಷರತ್ತನ್ನು ವಿಧಿಸಿ, ಅದನ್ನು ಒಪ್ಪುವುದಾದರೆ ಮದುವೆಗೆ ಸಿದ್ಧಳು ಎಂದು ಹೇಳಿ ಕಳಿಸಿದಳು, ಅದಕ್ಕೆಲ್ಲಾ ಸಮ್ಮತಿಸಿದ ಕೌಶಿಕನು ಅವಳ ಕೈಹಿಡಿದನು, ಈ ಮದುವೆಯಿಂದ ಅವನಿಗೆ ಮಿಗಿಲಾದ ಸಂತೋಷವಾಗಿದ್ದರೆ, ಮಹಾದೇವಿಗೆ ಇಷ್ಟವಿಲ್ಲದ ಬಂಧನವಾಗಿತ್ತು. ಒಂದಷ್ಟು ದಿನಗಳ ಪೂಜೆ ಪುನಸ್ಕಾರಗಳನ್ನು ಅರಮನೆಯ ವಾಸದಲ್ಲಿದ್ದುಕೊಂಡು ನೆರವೇರಿಸಿದಳು. ಆದರೆ ದಿನಕಳೆದಂತೆ ಕಾಮ ಭೋಗಗಳಲ್ಲಿ ತೃಪ್ತನಾಗುತ್ತಿದ್ದ ಕೌಶಿಕನು ಅವಳ ಮನಸ್ಸಿನ ಭಕ್ತಿಯನ್ನು ಅರಿಯದೆ ಹೋದನು.

ಗುರು–ಲಿಂಗ–ಜಂಗಮ ಸೇವೆಯಲ್ಲಿ ನಿರತವಾಗಿರುವಾಗ ಅಡ್ಡಿಪಡಿಸಿದ ಅವನ ಮೂರು ತಪ್ಪುಗಳು ಘಟಿಸಿದ ಮೇಲೆ ಎಲ್ಲವನ್ನು ಬಿಟ್ಟು ಬಯಲಾಗಿ ಹೊರಟು, ಶ್ರೀ ಶೈಲಕ್ಕೆ ನಡೆದಳು. ಮಹಾದೇವಿಯನ್ನು ಮತ್ತೆ ಪಡೆಯುವ ಸಲುವಾಗಿ ಶಿವಶರಣರ ಜೊತೆಗೆ ಹೋಗಿ ತಾನೂ ಶಿವಭಕ್ತನಾಗಿ ಮಾರ್ಪಟ್ಟಿರುವುದಾಗಿ ಹುಸಿಯನ್ನಾಡಿದನು. ಅವನ ನಿಜರೂಪ ಅರಿತ ಮಹಾದೇವಿ ಲೌಕಿಕ ಗಂಡನ ಬಗ್ಗೆ ಅಸಹ್ಯ ಮೂಡಿ ನಾನು ಪಾರಲೌಕಿಕ ಗಂಡನಾದ ಆ ಚೆನ್ನಮಲ್ಲಿಕಾರ್ಜುನನಿಗೆ ಮಾತ್ರ ಒಲಿದಿರುವುದಾಗಿ ಅವನು ನನಗೆ ಮಿತ್ರನೂ ಹೌದು, ನಾನವನ ದಾಸಿಯೂ ಹೌದು ಎಂದು ತನ್ನ ನಿಶ್ಚಲತೆಯ ಮನಸ್ಸನ್ನು ಬಿಚ್ಚಿಟ್ಟಳು. ಶಿವಧ್ಯಾನ, ಚಿಂತನೆ ಮೆರೆದ ಅವಳು ಶಿವಗೋಷ್ಠಿಯಲ್ಲೇ ಇದ್ದು ಶಿವಭಕ್ತಕುಲದ ನಡುವೆಯೇ ನಿಷ್ಠೆಯನ್ನು ಮೆರೆದ ಅವಳ ಭಕ್ತಿಯನ್ನು ಮೆಚ್ಚಿದ ಶಿವನು ಅವಳನ್ನು ಹರಸಿ ಕೈಲಾಸಕ್ಕೆ ಕರೆದೊಯ್ದು ರುದ್ರಕನ್ನಿಕೆ ಪದವಿಯನ್ನು ನೀಡಿ ಅವಳ ಕೀರ್ತಿಯನ್ನು ಸಾರಿ ಎಲ್ಲರನ್ನು ಸಂತೋಷಗೊಳಿಸಿದನು. ಮಹಾದೇವಿಯಕ್ಕನ ರಗಳೆಯಲ್ಲಿ ಎಂಬಿಷ್ಟು ವಿಷಯಗಳನ್ನು ವಿಸ್ತೃತ ಮತ್ತು ವರ್ಣನಾತ್ಮಕವಾಗಿ ರಚಿಸಿದ್ದಾನೆ. ಇಲ್ಲಿ ಮಹಾದೇವಿ ಪಾರ್ವತಿದೇವಿಯಿಂದ ಆಜ್ಞೆ ಪಡೆದ ಅಂಶ, ಬಾಲ್ಯ, ಯೌವನದ ವಿಷಯಗಳನ್ನು ತಿಳಿಸಿದನಂತರ ಶಿವಭಕ್ತಿ, ವೈರಾಗ್ಯ, ಸ್ವಯಂ ಹೋರಾಟ, ತನ್ನ ಆದರ್ಶಗಳನ್ನು ಪರಿಪಾಲಿಸುವಲ್ಲಿ ಅದಕ್ಕೆ ಧಕ್ಕೆ ಒದಗಿದಾಗ ಅಸಹಾಯಕಳಾಗಿ ಕೊರದೆ ಸಬಲಳಾಗಿ ತನ್ನ ವ್ಯಕ್ತಿತ್ವವನ್ನು ಕಟ್ಟಿಕೊಳ್ಳುವ ಬಗೆ ಗಮನಾರ್ಹವಾದುದು. ಮಹಾದೇವಿ ತನ್ನ ಕಾರಣ ಕುಟುಂಬಕ್ಕೆ ಬಂದ ಆಪತ್ತು ನಿವಾರಿಸುವ ಧೈರ್ಯ ತೋರಿ, ಸಮಸ್ಯೆಯನ್ನು ತಾನೇ ಎದುರಿಸಲು ಮುಂದಾಗುತ್ತಾಳೆ. ಸಂಪತ್ತು, ಅಧಿಕಾರ, ಆಸೆ–ಆಮಿಷಗಳನ್ನು ಮೀರಿ ತನ್ನದೇ ಆದ ಪಾರಮಾರ್ಥಿಕ ಆಕಾಂಕ್ಷೆಗೆ ಬದ್ಧಳಾಗಿ ನಿರ್ಮಲ ಬದುಕನ್ನು ಆಯ್ಕೆ ಮಾಡಿಕೊಂಡು ಮಾದರಿ ಹೆಣ್ಣಾಗಿ ಬದುಕುತ್ತಾಳೆ. ಪುರುಷ ಸಮಾಜದ ದಬ್ಬಾಳಿಕೆಯಿಂದ ತನ್ನ ಸ್ವಾತಂತ್ರ್ಯಕ್ಕೆ ಧಕ್ಕೆ ಒದಗಿದಾಗ ಅದನ್ನು ಪ್ರಬಲವಾಗಿ ವಿರೋಧಿಸಿ ಮುನ್ನುಗ್ಗುವ ಜಾಣ್ಮೆಯನ್ನು ಈಗಿನ ಸಮಾಜದ ಹೆಣ್ಣುಮಕ್ಕಳು ಇವಳನ್ನು ನೋಡಿ ಕಲಿಯಬಹುದು.

ಗಂಡನ ದರ್ಪ ಪ್ರತಿಷ್ಠೆಗಳಿಗೆ ಸೋಲದೆ ತನ್ನ ಸ್ಪಷ್ಟ ನಿಲವನ್ನು ಪ್ರತಿಪಾದಿಸಿದ್ದಾಳೆ. ಹೆಣ್ಣು ಅಬಲೆ, ಅಸಹಾಯಕಳು, ನಾಲ್ಕು ಗೋಡೆಯ ಮಧ್ಯೆ ಇರಬೇಕು ಎಂಬ ಬಂಧನದ ನೀತಿಗೆ ಪ್ರಭುತ್ವಕ್ಕೆ ತಕ್ಕ ಉತ್ತರ ಕೊಟ್ಟು, ವಿರೋಧವಾಗಿ ನಡೆದುಕೊಂಡಿರುವ ಅಕ್ಕ ಲೋಕ ಸಂಚಾರಿಯಾಗಿದ್ದಾಳೆ. ಸ್ತ್ರೀ ಶೋಷಣೆಯನ್ನು ಧೈರ್ಯವಾಗಿ ಎದುರಿಸುವ ಯೋಜನೆಯನ್ನೇ ಹಾಕಿಕೊಂಡಂತಿದೆ. ಅಕ್ಕನಿಗೆ ಶಿವನಲ್ಲಿ ಒಲವೂ ಇದೆ, ಸ್ನೇಹವೂ ಇದೆ, ಅವನನ್ನೇ ತನ್ನ



ಗಂಡನೆಂದು ಕರೆದಿರುವ ಅವಳ ಪರಿ ವಿಶೇಷವಾದುದು. ಶಿವನೊಂದಿಗಿನ ಈ ನಂಟು ಚಿರಕಾಲವಾಗಿ ಉಳಿಯುವಂತಹುದು ಎಂದು ತನ್ನ ವಚನಗಳಲ್ಲಿ ಹಾಡಿ ಹೊಗಳಿದ್ದಾಳೆ.

ಹರಿಹರನ ಮಹಾದೇವಿಯಕ್ಕನ ರಗಳೆಯಲ್ಲಿ ಅನುಭವಮಂಟಪದ ಪ್ರಸಂಗವು ಮೂಡಿಬರುವುದಿಲ್ಲ. ಆದರೆ ಇವಳ ಕಥೆಯನ್ನು ಕಾವ್ಯವಾಗಿ ಬಣ್ಣಿಸಿ ಆಕೆಯನ್ನು ಅನುಭವ ಮಂಟಪಕ್ಕೆ ಕರೆದು ತಂದು ವಚನಗಳ ಸಾರದ ಅಡಿಯಲ್ಲಿ ಪ್ರಶ್ನೆ–ಚರ್ಚೆ ವೈರಾಗ್ಯವನ್ನು ಮೆರೆಯುವಂತೆ ಮಾಡಿದ್ದಾರೆ. ಅನುಭವ ಮಂಟಪದಲ್ಲಿ ಅವಳಿಗೊಂದು ಹೆಗ್ಗಳಿಯ ಸ್ಥಾನ ಕಲ್ಪಿಸಿದ್ದಾರೆ. ಮೊಟ್ಟ ಮೊದಲ ವಚನಕಾರ್ತಿಯಾದ ಇವಳನ್ನು ಬಸವಣ್ಣ, ಚನ್ನಬಸವಣ್ಣ, ಪ್ರಭುದೇವ, ಕಿನ್ನರಿ ಬೊಮ್ಮಯ್ಯ, ಮಡಿವಾಳ ಮಾಚಿತಂದೆ ಮೊದಲಾದವರೆಲ್ಲಾ ಅವಳನ್ನು ಪ್ರಶ್ನಿಸಿ, ಚರ್ಚೆಗೆ ಒಳಪಡಿಸುತ್ತಾರೆ.

೧) ಮಹಾದೇವಿಯು ಕಲ್ಯಾಣವನ್ನು ಪ್ರವೇಶಿಸುವ ಮುನ್ನ ಕಠಿಣ ಪರೀಕ್ಷೆಗೆ ಒಳಗಾಗಿ ಅದರಲ್ಲಿ ಗೆದ್ದು ಪ್ರಶಂಸೆಗೊಳಗಾಗುತ್ತಾಳೆ.

೨) ಅನುಭವ ಮಂಟಪದಲ್ಲಿದ್ದ ಹಿರಿಯ ಶರಣರೆಲ್ಲರೂ ಮಹಾದೇವಿಯಕ್ಕನ ಸ್ಥಿರ ಭಕ್ತಿಯನ್ನು ಕಂಡು ಮೆಚ್ಚಿ ನೋಡಿ ಅವಳನ್ನು ಮನಸ್ಸಾರೆ ಹೊಗಳುತ್ತಾರೆ. ಅಲ್ಲಿನ ಅನುಭವಿಗಳ ಒಡನಾಟದಲ್ಲಿ ಆಕೆಯ ಶಿವಭಕ್ತಿಯ ಆಧಿಕ್ಯವನ್ನು ಮೆರೆದು ಪರಮಸುಖಿಸುತ್ತಾಳೆ.

ಅಕ್ಕಮಹಾದೇವಿ ದೇಹದ ಅನಿತ್ಯತೆಯನ್ನು ಅರಿತವಳಾಗಿದ್ದಳು. 'ಹರನೇ ನೀನೇನಗೆ ಗಂಡನಾಗಬೇಕೆಂದು ಅನಂತಕಾಲ ತಪಿಸಿದ್ದೆ, ನೋಡಾ! ಹಸೆಯ ಮೇಲಣ ಮಾತು ಬೆಸಗೊಳ್ಳಲಟ್ಟಿದಡೆ ಶಶಿಧರನ ಹತ್ತಿರ ಕಳುಹಿದರೆಮ್ಮವರು. ಭಸ್ಮವನೆ ಹೂಸಿ, ಕಂಕಣವನೆ ಕಟ್ಟಿದರು ಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು ಆ ಎಳೆಯ ಪ್ರಾಯದಲ್ಲಿಯೆ ಅವಳಿಗೆ ದೇಹದ ಮೇಲಿನ ಅಭಿಮಾನ ತೀರಿಹೋಗಿತ್ತು. ಅವಳ ಶಿವಭಕ್ತಿ ಸ್ಥಿರವಾದುದು ಅದನ್ನು ಪರೀಕ್ಷಿಸಿದಷ್ಟೂ ಅದು ತನ್ನ ಹೊಳಪನ್ನು ಹೆಚ್ಚಿಸಿಕೊಳ್ಳುತ್ತಿತ್ತು.

**ಚಂದನವ ಕಡಿದು ಕೊರೆದು ತೇದಡೆ**
**ನೊಂದೆನೆಂದು ಕಂಪ ಬಿಟ್ಟಿತ್ತೆ ?**
**ತಂದು ಸುವರ್ಣವ ಕಡಿದೊರೆದಡೆ**
**ಬೆಂದು ಕಳಂಕ ಹಿಡಿಯಿತ್ತೆ ?**
**ಸಂದುಸಂದಕಡಿದ ಕಬ್ಬನು ತಂದು ಗಾಣದಲ್ಲಿಕ್ಕಿ ಅರೆದಡೆ,**
**ಬೆಂದು ಪಾಕಗೂಳ ಸಕ್ಕರೆಯಾಗಿ ನೊಂದೆನೆಂದು ಸಿಹಿಯಬಿಟ್ಟಿತ್ತೆ ?**
**ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೇ ಹಾನಿ**
**ಎನ್ನ ತಂದೆ ಚೆನ್ನ ಮಲ್ಲಿಕಾರ್ಜುನಯ್ಯಾ**
**ನೀ ಕೊಂದಡೆಯೂ ಶರಣೆಂಬುದ ಮಾಣೆ.**

ಹೀಗೆ ಆಕೆಯ ಆತ್ಮವಿಶ್ವಾಸ, ಭಕ್ತಿ, ಜ್ಞಾನ, ಧೈರ್ಯ, ಸ್ಥೈರ್ಯ, ವೈರಾಗ್ಯ ಗುಣಗಳಿಂದ ಮೌಲ್ಯಯುತವಾದ ಆದರ್ಶದ ಸ್ತ್ರೀತ್ವವನ್ನು ಕಟ್ಟಿಕೊಳ್ಳಲು ಸಿದ್ಧವಿದ್ದ ಅವಳು ಎಂತಹ ಅಗ್ನಿ ಪರೀಕ್ಷೆಗೂ ಸಿದ್ಧಳಿದ್ದಳು ಎಂಬುದನ್ನು ಮನಗಂಡ ಶಿವಶರಣರು ಆಕೆಯನ್ನು ಅನುಭವ ಮಂಟಪದ ಮುಖ್ಯ ಸದಸ್ಯಳನ್ನಾಗಿ ಮಾಡಿಕೊಂಡರು. ತನ್ನ ಸಾಧನೆಯಿಂದ ಸಿದ್ಧಿಯನ್ನು ಕಂಡುಕೊಂಡಳು.

ಮನುಷ್ಯನ ಜೀವನದಲ್ಲಿ ದಿನ–ರಾತ್ರಿ ಕಳೆದಂತೆ ಆಯುಷ್ಯ ಹೋದರೆ, ಭವಿಷ್ಯ ತೊಲಗುತ್ತದೆ

ಎಂದು ಅಕ್ಕ ಈ ರೀತಿ ಸಾರಿದ್ದಾಳೆ.

**"ಉದಯಾಸ್ತಮಾನವೆಂಬೆರಡು ಕೊಳಗದಲ್ಲಿ**

**ಆಯುಷ್ಯವೆಂಬ ರಾಶಿ ಅಳೆದು ತೀರದ ಮುನ್ನ".**

ಇಂದ್ರಿಯಗಳು ದೇಹವನ್ನು ಬಿಟ್ಟಿರದು, 'ಇಂದ್ರಿಯವನು ಬಿಟ್ಟು ಕಾಯವಿರದು, ಕಾಯವ ಬಿಟ್ಟು ಇಂದ್ರಿಯವಿರದು, ಆದ್ದರಿಂದ ಪಂಚೇಂದ್ರಿಯಗಳ ನಮ್ಮ ಸುತ್ತಣ ಪ್ರಪಂಚದ ಅರಿವನ್ನು ನೀಡುತ್ತದೆ. ಕತ್ತಲೆಯೆಂಬ ಅಜ್ಞಾನ ನಮಗರಿವಾಗದು, ಬೆಳಕೆಂಬ ಜ್ಞಾನದಲ್ಲಿಯೇ ಕಣ್ಣು ಕಾಣುವುದು ಜಗತ್ತನ್ನು ಅರಿಯುವುದು.

**ಕಂಗಳಲ್ಲಿ ಕಾಂಬೆನೆಂದು**

**ಕತ್ತಲೆಯ ಹೊಕ್ಕಡೆಂತಹುದಯ್ಯಾ ?**

ಕಣ್ಣು ಕಾಣದ ಕುರುಡನಿಗೆ ಕನ್ನಡಿ ನಿರುಪಯುಕ್ತ, ಆದರೆ ಲೋಕದ ದೂಷಣೆಗೆ ಒಳಗಾಗುತ್ತಾನೆ.

**ಗೂಗೆ ಕಣ್ಣ ಕಾಣಲರಿಯದೆ ರವಿಯ ಬಯ್ವುದು**

**ಕಾಗೆ ಕಣ್ಣ ಕಾಣಲರಿಯದೆ ಶಶಿಯ ಬಯ್ವುದು**

**ಕುರುಡ ಕಣ್ಣ ಕಾಣಲರಿಯದೆ ಕನ್ನಡಿಯ ಬಯ್ವನು.**

ದೇಹದ ವರ್ತನೆಗಳೆಲ್ಲಕ್ಕೂ ಮನಸ್ಸಿನ ನಿರ್ದೇಶನವಿರಲೇಬೇಕು ಎಂಬ ಮಾತಿಗೆ ಅಕ್ಕ ಲೋಕದ 'ಚೇಷ್ಟೆಗೆ ರವಿ ಬೀಜವಾದಂತೆ ಕರಣಂಗಳ ಚೇಷ್ಟೆಗೆ ಮನವೇ ಬೀಜ' ಎಂದು ಸಾರಿದ್ದಾಳೆ.

ಹುಟ್ಟು-ಸಾವು-ನೋವು ಪ್ರತಿಯೊಂದು ಜೀವರಾಶಿಗೆ ಇರತಕ್ಕದ್ದು ಅದರಿಂದ ತಪ್ಪಿಸಿಕೊಳ್ಳಲು ಯಾವ ವಿದ್ಯೆ-ದಾರಿಯನ್ನು ಹಿಡಿಯಲಾಗುವುದಿಲ್ಲ.

**ಸಂಗದಿಂದಲ್ಲವೇ ಅಗ್ನಿ ಹುಟ್ಟುದು**

**ಸಂಗದಿಂದಲ್ಲದೆ ಬೀಜ ಮೊಳೆಯದು**

**ಸಂಗದಿಂದಲ್ಲದೆ ಹೂವಾಗದು.**

ಹೊಸ ಜನ್ಮ ನೀಡಿದ ತಾಯ ನೋವನ್ನು ತಾಯಂದಿರೇ ಬಲ್ಲರೇ ವಿನಃ ಬಂಜೆ ಅರಿತಿರುವುದಿಲ್ಲ.

**ಬಂಜೆ ಬೇನೆಯನರಿವಳೆ ?**

**ಮಲತಾಯಿ ಮುದ್ದಬಲ್ಲಳೆ ?**

ನೊಂದವನ ನೋವು ನೋಯದವರೆತ್ತ ಬಲ್ಲರು, ಎಂದು ತಿಳಿಸುವ ಮೂಲಕ ಈ ಸಮಾಜದಲ್ಲಿ ಸಮಸ್ಯೆಗೆ ಒಳಗಾಗಿರುವವನೇ ಸಮಸ್ಯೆಯ ಸ್ವರೂಪವನ್ನು ಬಲ್ಲರೇ ವಿನಃ ಅನ್ಯರಿಗೆ ಅದು ವೇದ್ಯವಾಗುವುದಿಲ್ಲ ಎಂದು ನಿವೇದಿಸಿದ್ದಾಳೆ.

ಜನ್ಮತಾಳಿದ ಪ್ರತಿಯೊಂದು ಜೀವಿಗೂ ಸಾವು ನಿಶ್ಚಿತ. ಅದರಿಂದ ತಪ್ಪಿಸಿಕೊಳ್ಳಲು ಏನೇ ಮಾಡಿದರೂ ಸಾಧ್ಯವಿಲ್ಲ ಎಂಬ ಸಾರ್ವಕಾಲಿಕ ಸತ್ಯವನ್ನು ಸಾರಿದ್ದಾಳೆ. ಮುಕ್ತಿಯ ಕಡೆಗೆ ಕೊಂಡೊಯ್ಯುವ ಭಕ್ತಿ-ಜ್ಞಾನ ಮಾರ್ಗದಿಂದ ಆತ್ಮಸ್ಥೈರ್ಯವನ್ನು ಕಂಡುಕೊಂಡಿದ್ದಾಳೆ.

**ಆವವಿದ್ಯೆಯ ಕಲಿತಡೇನು ?**

ಸಾವ ವಿದ್ಯೆ ಬೆನ್ನ ಬಿಡದು .

**ಅಶನವ ತೊರೆದಡೇನು, ವ್ಯಸನವ ಮರೆದಡೇನು**



**ಉಸುರ ಹಿಡಿದಡೇನು, ಬಸುರ ಕಟ್ಟಿದಡೇನು**

**ಚೆನ್ನಮಲ್ಲಿಕಾರ್ಜುನ ದೇವಯ್ಯಾ**

**ನೆಲ ತಳವಾರನಾದಡೆ ಕಳ್ಳನೆಲ್ಲಿಗೆ ಹೋಹನು ?**

ಅರಿಷಡ್ವರ್ಗಗಳಿಂದ ಬಳಲುತ್ತಿರುವ ಮನುಷ್ಯರು ಅಂಧಕಾರದಲ್ಲಿ ಮುಳುಗಿದ್ದಾರೆ. ದುರಾಭ್ಯಾಸ, ದುರ್ವರ್ತನೆಗಳಿಂದ ಕೂಡಿದ ಮನುಷ್ಯರು ಶಿವನನ್ನು ಕಾಣಲು ಸಾಧ್ಯವಿಲ್ಲ.

**ಅಸನದಿಂದ ಕುದಿದು,**

**ವ್ಯಸನದಿಂದ ಬೆಂದು**

**ಅತಿ ಆಸೆಯಿಂದ ಬಳಲಿ,**

**ವಿಷಯಕ್ಕೆ ಹರಿದ ಜೀವಿಗಳು ನಿಮ್ಮನರಿಯರು**

**ಕಾಲಕಲ್ಪಿತ ಪ್ರಳಯ ಜೀವಿಗಳೆಲ್ಲ**

**ನಿಮ್ಮನೆತ್ತ ಬಲ್ಲರಯ್ಯ ಚೆನ್ನಮಲ್ಲಿಕಾರ್ಜುನಾ ?**

ಶಿವನನ್ನು ಅರಿಯಲು ಮೌಲ್ಯಾದರ್ಶಗಳು ಭಕ್ತಿಯ ಜೊತೆ ಮಿಳಿತವಾಗಬೇಕು ಎಂದು ತಿಳಿಸಿದ್ದಾಳೆ.

**ಹಸಿವಾದರೆ ಊರೊಳಗೆ ಭಿಕ್ಷಾನ್ನಗಳುಂಟು**

**ತೃಷೆಯಾದರೆ ಕೆರೆ ಬಾವಿ ಹಳ್ಳಂಗಳುಂಟು**

**ಅಂಗಶೀತಕ್ಕೆ ಹಾಳು ದೇಗುಲಗಳುಂಟು**

**ಶಯನಕ್ಕೆ ಹಾಳುದೇಗುಲವುಂಟು**

**ಚೆನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನೆನಗುಂಟು**

ಇರುವುದರಲ್ಲಿ ತೃಪ್ತಿಯನ್ನು ಕಾಣುವ ಅಕ್ಕ ಏಳೇಳು ಜನ್ಮಕಳೆದರೂ ಶಿವನೇ ತನ್ನ ಬಂಧು-ಬಳಗ ಮತ್ತು ಚೆನ್ನಮಲ್ಲಿಕಾರ್ಜುನನೇ ನನ್ನ ಪತಿ, ಇದಕ್ಕಿಂತ ಮಿಗಿಲಾದುದು ತನಗೇನಿದೆ ಎಂದು ಸಂಭ್ರಮಿಸಿದ್ದಾಳೆ.

**ಎನ್ನಂತೆ ಪುಣ್ಯಂಗೆಯ್ದವರುಂಟೆ**

**ಎನ್ನಂತೆ ಭಾಗ್ಯಂಗೆಯ್ದವರುಂಟೆ ?**

**ಕಿನ್ನರನಂತಪ್ಪ ಸೋದರನೆನಗೆ**

**ಏಳೇಳು ಜನ್ಮದಲ್ಲಿ ಶಿವಭಕ್ತರೇ ಬಂಧುಗಳೆನಗೆ**

**ಚೆನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ ಎನಗೆ**

'ಕಿಚ್ಚಿಲ್ಲದ ಬೇಗೆಯಲ್ಲಿ ಬೆಂದೆನವ್ವಾ, ಆ ಏರಿಲ್ಲದ ಗಾಯದಲ್ಲಿ ನೊಂದೆನವ್ವಾ, ಸುಖವಿಲ್ಲದೆ ಧಾವತಿಗೊಂಡೆನವ್ವಾ, ಆ ಚೆನ್ನಮಲ್ಲಿಕಾರ್ಜುನ ದೇವರಿಗೊಲಿದು ಬಾರದ ಭವಂಗಳಲ್ಲಿ ಬಂದೆನವ್ವಾ!' 'ಹೊಳೆವ ಕೆಂಜೆಡೆಯ ಮೇಲೆ ಎಳೆಳದಿಂಗಳು ಫಣಿಮಣಿ ಕುಂಡಲವೆ ನೋಡವ್ವಾ । ರುಂಡ ಮಾಲೆಯ ಕೊರಳವನೆ ಕಂಡಡೆ ಬರಹೇಳವ್ವಾ, ಗೋವಿಂದನ ನಯನ ಉಂಗುಟದ ಮೇಲಿಪ್ಪುದು. ಆಕೆಯದು ಎರಡಿಲ್ಲದ ಭಕ್ತಿ, ಶಿವನಿಗೊಲಿದ ಅವಳ ಮನಸ್ಸು, ನಿಶ್ಚಲವಾದುದು ಅವಳ ವಚನಗಳು ಸತಿ ಪತಿ ಭಾವದ ಮಧುರಭಕ್ತಿ, ಭಾವಗೀತೆಯ ಮಾಧುರ್ಯ ಮತ್ತು ವೀರಶೈವದ ಉದಾರ ತತ್ತ್ವದಿಂದ ಮೂಡಿಬಂದಿದೆ. ಆಕೆಯ ವಚನಗಳನ್ನು ಚನ್ನ ಬಸವಣ್ಣ ಹೀಗೆ ವರ್ಣಿಸುತ್ತಾನೆ.

**ಆದ್ಯರ ಅರವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ**

**ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತು ವಚನ**
**ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ,**
**ಅಜಗಣ್ಣನ ಐದು ವಚನಕ್ಕೆ**
**ಮಹಾದೇವಿಯಕ್ಕನ ಒಂದು ವಚನ ನಿರ್ವಚನ ಕಾಣಾ ಕೂಡಲಸಂಗಮದೇವಾ.**

ಎಂದು ಅಕ್ಕನ ವಚನಗಳನ್ನು ಕುರಿತು ಹೇಳಿರುವುದು ಔಚಿತ್ಯಪೂರ್ಣವಾಗಿದೆ. ಅಕ್ಕ ತನ್ನ ಅನುಭಾವಿಕ ನೆಲೆಗಳಿಂದ ಬರೆದಿರುವ ವಚನಗಳು ಆಕೆ ಹಿರಿಮೆಯನ್ನು ತಂದುಕೊಟ್ಟಿವೆ. ಕನ್ನಡದ ಮೊಟ್ಟಮೊದಲ ಕವಯತ್ರಿ ಅಕ್ಕ ಮಹಾದೇವಿಯ ಕಾವ್ಯ ಸೇವೆಯನ್ನು ಗೌರವಿಸುವುದು ಸಾರ್ಥಕವೆನಿಸಿದೆ.

ಶಿವನೇ ತನ್ನ ಪತಿಯೆಂದು ಸ್ಥಿರ ಭಕ್ತಿಯನ್ನು ತೋರ್ಪಡಿಸಿದ ಅಕ್ಕ ಮಹಾದೇವಿ ನಡೆಸಿದ ಸಾಧನೆ ಅನನ್ಯ. ಬಹಿರಂಗ ಶುದ್ಧಿಗಿಂತ ಅಂತರಂಗ ಶುದ್ಧಿಯೇ ಮುಖ್ಯವಾದದ್ದು. ಶಿವನನ್ನು ಒಲಿದ ದೇಹ ಹೇಗಿದ್ದರೂ ಅದು ಭಕ್ತ ಜೀವಿಯೇ ಹೊರತು ಬೇರೆಯದಲ್ಲ.

**ಕಾಯ ಕರ್ರನೆ ಕಂದಿದರೇನಯ್ಯ ?** ,
**ಕಾಯ ಮಿರ್ರನೆ ಮಿಂಚಿದರೇನಯ್ಯ ?**
**ಅಂತರಂಗ ಶುದ್ಧವಾದ ಬಳಿಕ ಮಲ್ಲಿಕಾರ್ಜುನ**
**ಲಿಂಗವು ಒಲಿದ ಕಾಯವು ಹೇಗಿದ್ದರೇನಯ್ಯ ?**

ಸಾಂಪ್ರದಾಯಿಕ ಲಗ್ನದ ಬಂಧನವನ್ನು ಕಿತ್ತೊಗೆದು, ಲೌಕಿಕ ಗಂಡರಿಗೆ ಒಲ್ಲೆಯೆಂದು ಪಾರಲೌಕಿಕ ಗಂಡನೇ ಪತಿಯೆಂದು ನಿರ್ಧರಿಸಿ ಸ್ಥಿರ ಭಕ್ತಿಯನ್ನು ಮೆರೆದು ಕ್ರಾಂತಿಯನ್ನು ಸೃಷ್ಟಿಸಿದಳು ಎನ್ನಬಹುದು.

ಆಕೆಯು ಕಲ್ಯಾಣಕ್ಕೆ ಹೋಗುವ ಹಾದಿಯಲ್ಲಿ ಕಾಡು-ಮೇಡು, ನದಿ-ತೊರೆಗಳು, ಕಲ್ಲು-ಗವಿಗಳು, ಕಾಡು ಪ್ರಾಣಿಗಳನ್ನು ಲಕ್ಷಿಸದೆ ಮಲ್ಲಿಕಾರ್ಜುನನ್ನು ನೆನೆಯುತ್ತಾ ಅವನಿಗಾಗಿ ಹಾತೊರೆದಳು ಶಿವಭಕ್ತಿಯಲ್ಲಿ, ಆತ್ಮೀಯ ಭಾವುಕ ಭಕ್ತಿ, ನಿಶ್ಚಿತತೆ ಮತ್ತು ನಿರ್ಮಲತೆ ಎದ್ದು ಕಾಣುತ್ತದೆ.

'ಅಳಿಸಂಕುಳವೇ, ಮಾಮರವೇ, ಬೆಳದಿಂಗಳೇ, ಕೋಗಿಲೆಯೇ ನಿಮ್ಮನೆಲ್ಲರನು ಒಂದು ಬೇಡುವೆನು, ಎನ್ನೊಡೆಯ ಚೆನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ'

**ಚಿಲಿಮಿಲಿ ಎಂದೋದುವ ಗಿಳಿಗಳಿರಾ**
**ನೀವು ಕಾಣಿರೆ ನೀವು ಕಾಣಿರೆ**
**ಸರವೆತ್ತಿ ಪಾಡುವ ಕೋಗಿಲೆಗಳಿರಾ**
**ನೀವು ಕಾಣಿರೆ, ನೀವು ಕಾಣಿರೆ**
**ಎರಗಿ ಬಂದಾಡುವ ತುಂಬಿಗಳಿರಾ**
**ನೀವು ಕಾಣಿರೆ ನೀವು ಕಾಣಿರೆ**
**ಕೊಳನತಡಿಯೊಳಾಡುವ ಹಂಸೆಗಳಿರಾ**
**ನೀವು ಕಾಣಿರೆ ನೀವು ಕಾಣಿರೆ**
**ಚೆನ್ನಮಲ್ಲಿಕಾರ್ಜುನ ನೆಲ್ಲಿದ್ದಹನೆಂದು ಹೇಳಿರೆ**

ಹೀಗೆ ಶಿವನಿಗಾಗಿ ಕಾಡುಮೇಡುಗಳಲ್ಲಿ ಅಲೆಯುವಾಗ ದುಷ್ಟರಿಂದ, ಕಾಡು-ಮೃಗಗಳಿಂದ ಕಾಟ, ಅಂಜಿಕೆಯಾಗಲಿಲ್ಲವೇ ಎಂದು ಆಕೆಯನ್ನು ಪ್ರಶ್ನಿಸಿದಾಗ ಈ ಲೋಕದಲ್ಲಿ ಹುಟ್ಟಿದ



ಮೇಲೆ ಭಯ-ಅಂಜಿಕೆಯನ್ನು ತೊರೆದು, ಹೊಗಳಿಕೆ-ತೆಗಳಿಕೆಗಳು ಬಂದರೆ ಕೋಪವನ್ನು ಮಾಡಿಕೊಳ್ಳದೆ ಸಮಾಧಾನವಾಗಿರಬೇಕು ಎಂದು ಮಾರ್ಮಿಕವಾಗಿ ನುಡಿದಳು.

**ಬೆಟ್ಟದ ಮೇಲೊಂದು ಮನೆಯ ಮಾಡಿ**
**ಮೃಗಗಳಿಗಂಜಿ ದೊಡೆಂತಯ್ಯ ?**
**ಸಮುದ್ರದ ತಡಿಯಲೊಂದು ಮನೆಯ ಮಾಡಿ**
**ನೊರೆ ತೊರೆಗಳಿಗಂಜಿದೊಡೆಂತಯ್ಯ ?**
**ಸಂತೆಯೊಳಗೊಂದು ಮನೆಯ ಮಾಡಿ**
**ಶಬ್ದಕ್ಕೆ ನಾಚಿದೊಡೆಂತಯ್ಯ ?**
**ಚೆನ್ನಮಲ್ಲಿಕಾರ್ಜುನದೇವ ಕೇಳಯ್ಯ**
**ಈ ಲೋಕದೊಳಗೆ ಹುಟ್ಟಿದ ಬಳಿಕ**
**ಸ್ತುತಿ ನಿಂದೆಗಳು ಬಂದರೆ ಮನದಲ್ಲಿ**
**ಕೋಪವ ತಾಳದೆ ಸಮಾಧಾನಿಯಾಗಿರಬೇಕು.**

ಅಕ್ಕಮಹಾದೇವಿಗೆ ಶಿವಭಕ್ತಿ ಎಂಬುದು ಜನ್ಮತಃ ಬಂದುದು, 'ಶರಣಸತಿ ಲಿಂಗಪತಿ' ಎಂಬ ಆದರ್ಶಕ್ಕೆ, ಆತ್ಮೀಯ-ಮಧುರ ಶಿವಭಕ್ತಿಯನ್ನು ಬೆಳೆಸಿಕೊಂಡು ಮಾದರಿ ಹೆಣ್ಣಾಗಿ ರೂಪಿತವಾದಳು. ಸತಿ-ಪತಿ ಭಾವವನ್ನು ನಿಶ್ಚಲವಾಗಿ ಮೈಗೂಡಿಸಿಕೊಂಡವಳು. ಭವಿಯ ಸತಿಯಾಗುವ ಸಂದರ್ಭ ಅವಳ ಪಾಲಿಗೆ ಬರಸಿಡಿಲೆರಗಿದಂತಾಗಿತ್ತು. ಭವಿಯ ಅರಮನೆಯಲ್ಲಿದ್ದರೂ ಶಿವಭಕ್ತಿಗೆ, ಪೂಜೆಗೆ ಎಳ್ಳಷ್ಟೂ ಲೋಪಮಾಡದೆ, ಷರತ್ತಿನಂತೆ ಮೂರು ತಪ್ಪುಗಳು ನಡೆದ ಮೇಲೆ ವಿರಾಗಿಯಾಗಿ ಬಂಧು-ಬಳಗದ ಮಾತಿಗೊಲಿಯದೆ ಶ್ರೀಶೈಲಕ್ಕೆ ನಡೆದು ಅಲ್ಲಿ ಪಾರಲೌಕಿಕ ಒಡೆಯನಿಗೆ ಒಲಿದ ತನ್ನ ಮನಸ್ಸಿನ ಭಾವನೆಯನ್ನು ಹೀಗೆ ಹಂಚಿಕೊಳ್ಳುತ್ತಾಳೆ ತಾನೊಲಿದ ಪತಿಯ ಲಕ್ಷಣ ತಿಳಿಸಿ ಬಾಳನ್ನೆಲ್ಲಾ ಆತನ ಆರಾಧನೆಯಲ್ಲಿಯೇ ಸವೆಸಿ ಅವನಲ್ಲಿಯೇ ಐಕ್ಯಳಾದವಳು.

**ಸಾವಿಲ್ಲದ ಕೇಡಿಲ್ಲದ ರೂಹಿಲ್ಲದ ಚೆಲುವಂಗೆ ನಾನೊಲಿದೆ**
**ಎಡೆಯಿಲ್ಲದ ಕಡೆಯಿಲ್ಲದ ತೆರಹಿಲ್ಲದ ಕುರುಹಿಲ್ಲದ ಚೆಲುವಂಗೆ ನಾನೊಲಿದೆ**
**ಎಲೆ ಅವ್ವಗಳಿರಾ**
**ಭವವಿಲ್ಲದ ಭಯವಿಲ್ಲದ ನಿರ್ಭಯ ಚೆಲುವಂಗೊಲಿದೆ**
**ನಾನು ಸೀಮೆಯಿಲ್ಲದ ನಿಸ್ಸೀಮಂಗೊಲಿದೆ**
**ನಾನು ಚೆನ್ನಮಲ್ಲಿಕಾರ್ಜುನನೆಂಬ ಗಂಡಂಗೆ**
**ಮಿಗೆ ಮಿಗೆ ಒಲಿದೆ ಎಲೆ ಅವ್ವಗಳಿರಾ.**

ಅಕ್ಕನ ವಚನಗಳಲ್ಲಿ ಬೋಧನೆ-ಉಪದೇಶ ನಯ-ವಿನಯಕ್ಕಿಂತ ಸ್ಪಷ್ಟ ನಿಲವು ಧೋರಣೆ, ಮುಗ್ಧಶಿವಭಕ್ತಿ, ಭಾವುಕತನ, ಆತ್ಮಾಭಿಮಾನ, ಭಕ್ತಿ-ಜ್ಞಾನ-ವೈರಾಗ್ಯ ಮತ್ತು ಲೋಕಾನುಭವವು ಹೊರಹೊಮ್ಮಿದೆ. ಆಕೆಯ ಎಷ್ಟೋ ವಚನಗಳು ಶಿವನ ಮೇಲಿನ ಪ್ರೇಮವನ್ನು ತನ್ನ ಹೃದಯದ ಅಂತರಾಳದಿಂದ ಬಿಚ್ಚಿಡುತ್ತವೆ. ಶಿವನ ಪ್ರೇಮವು "ಸತ್ಯಂ-ಶಿವಂ-ಸುಂದರಂ" ಎಂಬಂತೆ ಸಾಹಿತ್ಯರೂಪದಲ್ಲಿ ರಸವತ್ತಾಗಿ, ಸತ್ವಯುತವಾಗಿ ಹೊರಹೊಮ್ಮಿದೆ. ಯೋಗಾಂಗ ತ್ರಿವಿಧಿ ಎಂಬ ಅರವತ್ತೇಳು ತ್ರಿಪದಿಗಳ ಚಿಕ್ಕ ಕೃತಿಯನ್ನು ಬರೆದಿರುವಳು. ಕೆಲವು ವಚನಗಳಲ್ಲಿ ಬೆಡಗಿನ ವಚನಗಳ ನೆರಳಿದೆ.

ಅಕ್ಕ ಕೇಳೌ
ನಾನೊಂದು ಕನಸ ಕಂಡೆ
ಅಕ್ಕಿ ಅಡಕೆ ಓಲೆ ತೆಂಗಿನ ಕಾಯಿ ಕಂಡೆ
ಚಿಕ್ಕ ಚಿಕ್ಕ ಕೆಂಜೆಡೆಗಳ ಸುಲಿಪಲ್ಲ ಗೊರವನು
ಭಿಕ್ಷಕ್ಕೆ ಮನೆಗೆ ಬಂದುದ ಕಂಡೆನವ್ವಾ
ಮಿಕ್ಕು ಮೀರಿ ಹೋಹನ ಬೆಂಬತ್ತಿ ಕೈವಿಡಿದೆನು.
ಚೆನ್ನಮಲ್ಲಿಕಾರ್ಜುನನ ಕಂಡು ಕಣ್ದೆರೆದೆನು.

ಚೆನ್ನಮಲ್ಲಿಕಾರ್ಜುನನ್ನು ತನ್ನ ಕನಸ್ಸಿನಲ್ಲಿ ಕಂಡ ಬಗೆಯನ್ನು ಸ್ಮರಿಸುತ್ತಾ ಶುಭಸೂಚನೆಗಳ ಸಂಕೇತವಾಗಿ ಅಕ್ಕಿ-ಅಡಕೆ-ಓಲೆ-ತೆಂಗಿನಕಾಯ ಸೂಚಿಸುತ್ತಾಳೆ. ಅವಳ ತನು-ಮನವೆಲ್ಲ ಚೆನ್ನಮಲ್ಲಿಕಾರ್ಜುನನಲ್ಲೇ ಲೀನವಾಗಿಸಿಕೊಂಡ ಭಕ್ತ ಶ್ರೇಷ್ಠಳು. ನಿಷ್ಠುರಚಿತ್ತ, ನಿಶ್ಚಿತತೆ, ಅಸಾಧಾರಣ ಪ್ರತಿಭೆ, ಲೋಕಹಿತ ಚಿಂತನೆ, ಅಸಮಾನತೆ, ಅಜ್ಞಾನದ ಹಿಂಸೆಯನ್ನು ತೊಲಗಿಸುವ ದೀಪ ಜ್ಯೋತಿಯಂತೆ ಬೆಳಗಿದವಳು. ಇಲ್ಲಿ ಶಿವಲಿಂಗವೇ ಸರ್ವಸ್ವವೆಂಬ ಚೆನ್ನಮಲ್ಲಿಕಾಜುನನೇ ಅಕ್ಕ ಮಹಾದೇವಿಯ ಸರ್ವಸ್ವ. ಆತ್ಮಶುದ್ಧಿಕಾಣುವುದೆಂದರೆ ಮೊದಲು ನಮ್ಮಲ್ಲಿ ನಾವು ಬೆಳಕಾಗುವುದು. ಆಚಾರ, ವಿಚಾರ, ಜ್ಞಾನ, ಒಲವು, ಜೀವನ ಶುದ್ಧಿ ಪರಿಪಕ್ವವಾಗಿರಬೇಕೆಂಬುದೇ ಅಕ್ಕ ಮಹಾದೇವಿಯ ಆಶಯವಾಗಿತ್ತು ಗಂಡು-ಹೆಣ್ಣುಗಳೆಂಬ ಎರಡೂ ಭಾವಗಳನ್ನು ಅಳಿದು ಸಮಾನತೆಯ ತತ್ತ್ವದಡಿಯಲ್ಲಿ ಬದುಕನ್ನು ಸಾಗಿಸಿದಾಗ ಮಾತ್ರ ಸಂಸಾರದ ಬಾಳೆಂಬ ಬಂಡಿ ಸುಖ, ಸುಖ್ಯವಾಗಿ ಸಾಗಲು ಸಾಧ್ಯವೆಂಬುದು ಇಲ್ಲಿನ ಆಶಯವಾಗಿದೆ.



ಸಿದ್ಧರಾಮನ ವಚನಗಳಲ್ಲಿ ಹಲವು ಕಡೆಗೆ ವೈಚಾರಿಕ ಕಿಡಿ ನಿಗಿನಿಗಿಸುತ್ತದೆ; ಆ ಕಿಡಿ ಕಾಣುವಂತೆ ಅವನು ಸಂದರ್ಭೋಚಿತ, ಸೂಕ್ತಪದ, ಪದ ಪುಂಜಗಳನ್ನು ಬಳಸುತ್ತಾನೆ; ಸೂಕ್ತವಾದ ದೃಷ್ಟಾಂತ್ಯಗಳನ್ನು, ರೂಪಕಗಳನ್ನು, ಪ್ರತಿವಸ್ತೂಪಮೆಗಳನ್ನು ಬಳಸುತ್ತಾನೆ. ಹಲವು ವಚನಗಳಲ್ಲಿ ಶಿವಶರಣರ ಮಾರ್ಗವನ್ನೂ ಪ್ರತಿಪಾದಿಸುತ್ತಾನೆ; ಈ ಪ್ರತಿಪಾದನೆಯಲ್ಲಿ, ಜನತೆಗೆ ಪರಿಚಿತವಾದ ಶಬ್ದಗಳಲ್ಲಿ, ಜನತೆಗೆ ತೀವ್ರವಾಗಿ ಅರ್ಥವಾಗುವಂತೆ ಹೇಳುವುದು ಸಿದ್ಧರಾಮನ ವಚನಗಳ ರೀತಿಯಾಗಿದೆ.



# ಯೋಗಿಗಳ ಯೋಗಿ ಶಿವಯೋಗಿ ಸಿದ್ಧರಾಮ

'ಯೋಗಿಗಳ ಯೋಗಿ ಶಿವಯೋಗಿ' ಎಂದು ಕೀರ್ತಿತನಾದ ಸಿದ್ಧರಾಮ ೧೨ನೆಯ ಶತಮಾನದ ಸುಪ್ರಸಿದ್ಧ ಶರಣ. ಕಪಿಲಸಿದ್ಧ ಮಲ್ಲಿಕಾರ್ಜುನಾ, ಕಪಿಲಸಿದ್ಧ ಮಲ್ಲಿನಾಥಾ, ಕಪಿಲಸಿದ್ಧ ಮಲ್ಲೇಶ್ವರ ಮುಂತಾದ ಅಂಕಿತಗಳಲ್ಲಿ ಅವನ ವಚನಗಳು ದೊರೆಯುತ್ತವೆ. ಅವನ ಒಂದು ವಚದಲ್ಲಿ 'ಅರವತ್ತೆಂಟು ಸಾವಿರ ವಚನಗಳನ್ನು ಹಾಡಿ ಹಾಡಿ ಸೋತಿತೆನ್ನಮನ' ಎಂಬ ಮಾತಿದೆ. ಆದರೆ ವಿದ್ವಾಂಸರು ಈ ದೊಡ್ಡ ಸಂಖ್ಯೆಯನ್ನು ಸಂದೇಹಿಸುತ್ತಾರೆ. ಅವನ ಕೆಲವು ವಚನಗಳು 'ಯೋಗಿನಾಥಾ' ಎಂಬ ಅಂಕಿತದಲ್ಲಿಯೂ ದೊರೆಯುತ್ತವೆ. ಅವನು ವಚನಗಳಲ್ಲದೆ ಸಂಕೀರ್ಣ ತ್ರಿವಿಧಿ, ಬಸವಸ್ತೋತ್ರ ತ್ರಿವಿಧಿ, ಅಷ್ಟಾವರಣ ತ್ರಿವಿಧಿಗಳನ್ನು ಯೋಗಿನಾಥಾ ಅಂಕಿತದಲ್ಲಿ ರಚಿಸಿದ್ದಾನೆ. ಸಿದ್ಧರಾಮನ ೧೬೭೯ ವಚನಗಳು ಸಮಗ್ರ ವಚನ ಸಂಪುಟ ಪ್ರಥಮ ಆವೃತ್ತಿಯಲ್ಲಿ ಪ್ರಕಟವಾಗಿವೆ.

ಸಿದ್ಧರಾಮನ ಜೀವನ ಒಂದು ವಿಸ್ಮಯದ ಗೊಂಚಲಿನಂತೆ ಸಾಗುತ್ತದೆ. ಧೂಳಿಮಾಕಾಳನೆಂಬ ಒಬ್ಬ ಸಾಮಾನ್ಯ ದನಕಾಯುವ ಹುಡುಗ ಕಾಯಕಯೋಗಿಯಾಗಿ, ಶಿವಯೋಗಿಯಾಗಿ ರೂಪಿತವಾಗುವ ರೋಚಕ ಕಥೆ ಪವಾಡ ಸದೃಶವಾಗಿ ಕಾಣುತ್ತದೆ. ಸಾಂಪ್ರದಾಯಿಕವಾಗಿ ಸಿದ್ಧರಾಮನ ಜನ್ಮಸ್ಥಳ ಸೊನ್ನಲಿಗೆ - ಈಗಿನ ಸೊಲ್ಲಾಪುರವೆಂದು ಭಾವಿಸಲಾಗಿದೆ. ಆದರೆ ಹೊಸ ಸಂಶೋಧನೆಯ ಪ್ರಕಾರ ಜತ್ ತಾಲೂಕಿನ ಸೊನಗೆಯಾಗಿದೆಯೆಂದು ಒಂದು ಅಭಿಪ್ರಾಯವಿದೆ. ಆದರೆ ಈ ಸಂಶೋಧನೆ ವಿದ್ವಾಂಸರಿಂದ ಅಷ್ಟಾಗಿ ಒಪ್ಪಿಗೆಯಾದಂತಿಲ್ಲ.

ಸಿದ್ಧರಾಮನ ಜೀವನವನ್ನು ಎರಡು ಹಂತಗಳಲ್ಲಿ ಗ್ರಹಿಸಲಾಗುತ್ತದೆ. ಮೊದಲನೆಯದು ಅಲ್ಲಮನ ಪ್ರೇರಣೆಯಿಂದ ಕಲ್ಯಾಣಕ್ಕೆ ಬರುವ ಮೊದಲು ಸೊನ್ನಲಿಗೆಯಲ್ಲಿ ಸಿದ್ಧರಾಮನ ಸಾಮಾಜಿಕ ಕಾರ್ಯಗಳಲ್ಲಿ ತೊಡಗಿದ್ದ ವ್ಯಕ್ತಿತ್ವ, ಎರಡನೆಯದು ಕಲ್ಯಾಣಕ್ಕೆ ಬಂದನಂತರ ಬಸವಾದಿ ಶರಣರ ಜೊತೆ ಸೇರಿ ತಾನು ಕೈಗೊಂಡ ಸಾಮಾಜಿಕ ಕಾರ್ಯಗಳಿಗಿಂತಲೂ ಅನುಭಾವದ ಸಿದ್ಧಿಗಾಗಿ ನಡೆಸಿದ ಅನುಪಮ ಪ್ರಯತ್ನ ಆ ಮೂಲಕ ಅನುಭಾವದ ಶಿಖರವನ್ನು ಮುಟ್ಟಿದ ಸಾರ್ಥಕ ಸ್ಥಿತಿ. ಬದುಕಿನುದ್ದಕ್ಕೂ ಬಹಳ ಕಾಲ ಸಾಮಾಜಿಕ ಹೊಣೆಯನ್ನು ಹೊತ್ತು, ಸಾಧನೆಯ ಶಿಖರ ಏರಿದ ವ್ಯಕ್ತಿ ಸಿದ್ಧರಾಮ. ಕೆರೆ, ಬಾವಿ, ಛತ್ರ, ದೇವಾಲಯ ನಿರ್ಮಾಣ, ಮದುವೆಗಳು, ಹೂದೋಟ, ಬಡವರ ನಿರ್ಗತಿಕರ ಋಣ ಪರಿಹಾರ ಮುಂತಾದ ಸಮಾಜ ಕಾರ್ಯಗಳಲ್ಲಿ ಬದ್ಧತೆಯಿಂದ ತೊಡಗಿಸಿಕೊಂಡು ಸಾರ್ಥಕವಾಗಿ ಬದುಕನ್ನು ರೂಪಿಸಿಕೊಂಡಿದ್ದನು. ಸಿದ್ಧರಾಮನಿಗೆ ಒತ್ತಾಸೆ ಬಂದದ್ದು ಶ್ರೀಶೈಲ ಮಲ್ಲಿಕಾರ್ಜುನನಿಂದ. 'ಶಿವಯೋಗಿಯ ಶರೀರಂ ವೃಥಾ ಸವೆಸಲಾಗದು' ಎಂಬುದು ಸಿದ್ಧರಾಮನ ಆದರ್ಶ. ರಾಘವಾಂಕ ಕವಿ ಸಿದ್ಧರಾಮನ ಜೀವನವನ್ನು ಚಿತ್ರಿಸುವಾಗ 'ಸಾಕಾರನಿಷ್ಠೆ ಭೂತಂಗಳೊಳನುಕಂಪೆ ತಾನೆ ಪರಬೊಮ್ಮ' ಎಂದು ಸೂತ್ರೀಕರಿಸಿದ್ದಾನೆ. ಅಲ್ಲಮನ ಮಾರ್ಗದರ್ಶನದಿಂದ ಸಿದ್ಧರಾಮ ಸೊನ್ನಲಿಗೆಯಿಂದ ಕಲ್ಯಾಣಕ್ಕೆ ಆಗಮಿಸುತ್ತಾನೆ. ಅಲ್ಲಿ ಲೌಕಿಕ ಪ್ರಪಂಚದ ಬಂಧವನ್ನು ಕಳಚಿಕೊಳ್ಳುತ್ತಾ ಅಲೌಕಿಕದ ಸೆಳೆತಕ್ಕೆ ಒಳಗಾಗುತ್ತಾನೆ. ತನ್ನ ಹಿಂದಿನ ಮತ್ತು ಅಂದಿನ ಜೀವನ ದೃಷ್ಟಿಭೇದಗಳನ್ನು ಕೆಲವು ವಚನಗಳಲ್ಲಿ ಮತ್ತು ಬಸವಸ್ತೋತ್ರ ತ್ರಿವಿಧಿಯಲ್ಲಿ ವ್ಯಕ್ತಮಾಡಿದ್ದಾನೆ.

ವಚನ ರಚನೆಯಲ್ಲಿ ಸಿದ್ಧರಾಮ ತನ್ನ ವಿಶೇಷತೆಗಳಿಂದ ವಿಶಿಷ್ಟಸ್ಥಾನವನ್ನು ಗಳಿಸಿಕೊಂಡಿದ್ದಾನೆ. ಕೆಲವು ರಚನೆಗಳಲ್ಲಿ ಬಸವಣ್ಣನವರ ವಚನಗಳಿಂದ ಪ್ರಭಾವಿತನಾಗಿರುವುದನ್ನು ವಿದ್ವಾಂಸರು ತೋರಿಸಿಕೊಟ್ಟಿದ್ದಾರೆ. ಕನ್ನಡ ಭಾಷೆಯ ನುಡಿಗಟ್ಟು, ಗಾದೆ, ದೇಸಿ ಸೊಗಡು ಸಿದ್ಧರಾಮನ ವಚನಗಳಲ್ಲಿ ಸಮೃದ್ಧವಾಗಿ ದೊರೆಯುತ್ತದೆ. 'ತಿಳಿನೀರೆಂಬೆ ತಿಳಿನೀರೆಂಬೆ ತಿಳಿ ನೀ ಎಂದು ಒಂದು ದಿನ ಅಂದಿಲ್ಲೆಲೆ ಮಾನವಾ'. 'ಅರಲುಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ' ಹಾಲುಳ್ಳಲ್ಲಿ ಹಬ್ಬವ ಮಾಡಿ ಗಾಳಿಯುಳ್ಳಲ್ಲಿ ತೂರಿಕೊಳ್ಳಿರಿ', 'ಅನುಭವವೆಂದು ಅನುಭಾವಿಕಂಗಲ್ಲದೆ ಹೊತ್ತಗೆಯಲಿಲ್ಲ', 'ಮನವಿದ್ದಲ್ಲಿಮಹಾದೇವನಿಪ್ಪ', 'ಜಲದೊಳಗೆ ಕಲ್ಲು ನೆನೆದು ಮೃದುವಪ್ಪುದೆ ಒಲವಿಲ್ಲದವಗೆ ಭಕ್ತಿ ನೆಲೆಗೊಂಬುದೆ', 'ಕೆರೆಯೊಳಗೆ ಬಾವಿಯನು ಅಗಳುವವ ಮುನ್ನೆಗ್ಗ' ಎಂಬಂತಹ ನೂರಾರು ಮಾತುಗಳು ಸಿದ್ಧರಾಮನ ಕನ್ನಡ ಭಾಷೆಯ ನೆಲೆಯನ್ನು ತೋರಿಸಿಕೊಡುತ್ತವೆ. ■

## ಮೇದರ ಕೇತಯ್ಯ

ಹನ್ನೆರಡನೆಯ ಶತಮಾನದ ಶಿವಶರಣರಲ್ಲಿ ಮೇದರ ಕೇತಯ್ಯ ಒಬ್ಬನು. ಇವನ ಕಾಯಕ ಪ್ರತಿನಿತ್ಯವೂ ಬೆಟ್ಟಕ್ಕೆ ಹೋಗಿ ಬಿದಿರುಗಳನ್ನು ಕಡಿದುಕೊಂಡು ಬಂದು ಅವುಗಳನ್ನು ಸೀಳಿ ಬುಟ್ಟಿ, ಮೊರ ಮೊದಲಾದ ಸಾಮಗ್ರಿಗಳನ್ನು ಹೆಣೆದು ಅವುಗಳನ್ನು ಪೇಟೆಯಲ್ಲಿ ಮಾರಿ ಬಂದ ಹಣದಿಂದ ಜೀವನ ಸಾಗಿಸುತ್ತಾ ದಾಸೋಹ ಮಾಡುತ್ತಿದ್ದರು. ಬಸವಣ್ಣನವರ ನೇತೃತ್ವದಲ್ಲಿ ನಡೆಯುತ್ತಿದ್ದ ಅನುಭಾವ ಗೋಷ್ಠಿಗಳಲ್ಲಿ ಭಾಗವಹಿಸುತ್ತಾ ಅನುಭಾವಿಯಾಗಿ ಘನತೆ ಪಡೆದನು. ಇವನ ವಚನಗಳ ಅಂಕಿತ ಗವರೇಶ್ವರಾ. ಗವರ (ಎಂದರೆ ಬಿದಿರ ಬುಟ್ಟಿ, ಪರ್ಯಾಯವಾಗಿ ಆ ಪದ ಬಿದಿರ ಕಾಯಕವನ್ನೂ ಸೂಚಿಸುತ್ತದೆ). ತನ್ನ ಕಾಯಕವನ್ನೇ ಈಶ್ವರನಾಮದೊಂದಿಗೆ ಸೇರಿಸಿಕೊಂಡ ಅಂಕಿತವನ್ನು ರೂಪಿಸಿಕೊಂಡಿದ್ದಾನೆ. ಇವನ ೧೪ ವಚನಗಳು ಪ್ರಕಟವಾಗಿವೆ.

ಮೇದರ ಕೇತಯ್ಯನ ಉಲ್ಲೇಖ ಭೀಮಕವಿಯ ಬಸವ ಪುರಾಣ, ಸಿಂಗಿರಾಜ ಪುರಾಣ, ಶಿವತತ್ವ ಚಿಂತಾಮಣಿಗಳಲ್ಲಿ ಕಂಡುಬರುತ್ತದೆ. ಬಸವಣ್ಣನವರನ್ನು ಮೇದರ ಕೇತಯ್ಯ ಬಹುಗೌರವದಿಂದ ಸ್ಮರಿಸಿದ್ದಾನೆ. ಅವನ ಬೇರೊಂದು ವಚನದಲ್ಲಿ ಬಸವಣ್ಣ, ಚೆನ್ನಬಸವಣ್ಣ, ಅಲ್ಲಮರನ್ನು ಗೌರವದಿಂದ ಸ್ಮರಿಸಿದ್ದಾನೆ.

ಸಂಸಾರವೆಂಬ ಸರ್ಪನ ಅಣಲೊಳಗಿದ್ದೆನಯ್ಯಾ
ಆವಾಗ ನುಂಗಿತ್ತೆಂದರಿಯೆನಯ್ಯ
ಆವಾಗ ಉಗುಳಿತ್ತೆಂದರಿಯೆನಯ್ಯ
ಅದರ ಬಾಯಿಂದೆನ್ನ ತೆಗೆದು ಕಾಯಯ್ಯ
ಕಪಿಲಸಿದ್ಧ ಮಲ್ಲಿಕಾರ್ಜುನಾ.

**ಸಿದ್ಧರಾಮ**





# ಶರಣ ಕ್ರಾಂತಿ – ನನ್ನ ಪ್ರತಿಕ್ರಿಯೆ

**ಡಾ. ಸಿ.ಯು. ಮಂಜುನಾಥ್**

ಶ್ರೀ ಜಗದ್ಗುರು ರೇಣುಕಾಚಾರ್ಯ ವಿಜ್ಞಾನ, ಕಲಾ ಮತ್ತು ವಾಣಿಜ್ಯ ಮಹಾವಿದ್ಯಾಲಯದಲ್ಲಿ ಕನ್ನಡ ಪ್ರಾಧ್ಯಾಪಕ ಮತ್ತು ಪ್ರಾಚಾರ್ಯರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದಾರೆ. ಇವರ 'ಶಾಸನಗಳು ಮತ್ತು ಕರ್ನಾಟಕ ಸಂಸ್ಕೃತಿ' ಕೃತಿಗೆ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿಎಚ್.ಡಿ. ಪದವಿ ದೊರೆತಿದೆ. ಅದೇ ಹೆಸರಿನಲ್ಲಿ ಅದು ಪ್ರಕಟವಾಗಿದೆ. ಇವರು ಕನ್ನಡದಲ್ಲಿ ರಚಿಸಿದ ಅಂಬಿಗರ ಚೌಡಯ್ಯ ಕೃತಿ ಇಂಗ್ಲಿಷ್ ಭಾಷೆಗೆ ಭಾಷಾಂತರವಾಗಿದೆ. ಸ್ವತಂತ್ರವಾಗಿ ಕ್ರಿಯಾಚೇತನ, ಸ್ವರ್ಣರೇಣುಕ, ಹೇಮದೀಪ್ತಿ, ಘಟ್ಟಿವಾಳಯ್ಯನ ವಚನಗಳು, ಬಸವೋತ್ತರ ಯುಗದ ಶರಣರ ಆಯ್ದ ವಚನಗಳು, ಚನ್ನಬಸವಣ್ಣನವರ ೧೦೮ ವಚನಗಳು ಕೃತಿಗಳನ್ನು ಸಂಪಾದಿಸಿದ್ದಾರೆ. ಈ ಕೃತಿ ಇಂಗ್ಲಿಷ್, ತಮಿಳು, ತೆಲುಗು, ಮಲೆಯಾಳಂ ಭಾಷೆಗಳಿಗೆ ಭಾಷಾಂತರವಾಗಿದೆ. ಸರ್ಪಭೂಷಣ ಶಿವಯೋಗಿಗಳ ದ್ವಿಶತಮಾನೋತ್ಸವ ಸಂಪುಟವನ್ನು ಡಾ.ಎಂ. ಚಿದಾನಂದಮೂರ್ತಿ ಅವರೊಂದಿಗೆ ಸಂಪಾದಿಸಿದ್ದಾರೆ. 'ವಚನಕಾರರು ವ್ಯಕ್ತಿ ಹಾಗೂ ಅಭಿವ್ಯಕ್ತಿ' ಕೃತಿಯನ್ನು ಡಾ.ಬಿ.ಸಿ. ವೀರಪ್ಪ ಅವರೊಂದಿಗೆ ಸಂಪಾದಿಸಿದ್ದಾರೆ. ಇತರರೊಂದಿಗೆ ಬೆಳ್ಳಿ ಬೆಡಗು, ನಿಸ್ಸೀಮ, ವಿದ್ಯಾರತ್ನ, ಬೆಳಕಿನ ಹೆಜ್ಜೆಗಳು, ಯಮಳ ಜ್ಯೋತಿ ಮುಂತಾದ ಕೃತಿಗಳನ್ನು ಸಂಪಾದಿಸಿದ್ದಾರೆ.

೧. ವಚನ ಸಾಹಿತ್ಯದ ವೈಶಿಷ್ಟ್ಯಗಳನ್ನು ಹೇಗೆ ಗುರುತಿಸುತ್ತೀರ?

**ಉತ್ತರ:** ವಚನ ಸಾಹಿತ್ಯ ೧೨ನೆಯ ಶತಮಾನದಲ್ಲಿ ಕರ್ನಾಟಕ ಪರಿಸರದಲ್ಲಿ ಧಾರ್ಮಿಕ, ಸಾಮಾಜಿಕ, ಆರ್ಥಿಕ, ಅನುಭಾವಿಕ ಮತ್ತು ಸಾಹಿತ್ಯಕ ವಲಯಗಳಲ್ಲಿ ಹೊಸ ಚೈತನ್ಯವನ್ನು ತಂದದ್ದು ಐತಿಹಾಸಿಕವಾಗಿ ಅತ್ಯಂತ ಪ್ರಸಿದ್ಧವಾದದ್ದು. ವಚನ ಸಾಹಿತ್ಯ ತನ್ನ ಹಿಂದಿನ ಕಾಲದಲ್ಲಿದ್ದ ಚಂಪೂ ಸಾಹಿತ್ಯದಿಂದ ಅಂತರ್ಯ ಮತ್ತು ರೂಪದಲ್ಲಿ ಭಿನ್ನವಾಗಿ ಕನ್ನಡ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿತು. ತನಗೆ ಹಿಂದೆ ಇದ್ದ ಚಂಪೂ ಸಾಹಿತ್ಯ ಪೌರಾಣಿಕ ಕಥಾವಸ್ತು, ದೊಡ್ಡಗಾತ್ರ, ವಸ್ತುಕ ಸ್ವರೂಪದ ಸಾಹಿತ್ಯವಾಗಿದ್ದು ರಾಜಾಶ್ರಯದಲ್ಲಿ ಬೆಳೆದು ಬಂದದ್ದು. ಕವಿಗಳಿಗೆ ವೈಯಕ್ತಿಕ ಅಭಿಪ್ರಾಯಗಳನ್ನು ಹೇಳಲು ಅಷ್ಟೊಂದು ಅವಕಾಶವಿರುತ್ತಿರಲಿಲ್ಲ. ಯಾವುದಾದರೂ ಪಾತ್ರದ ಮೂಲಕ ಕವಿಗಳು ಅವಕಾಶ ಕಲ್ಪಿಸಿಕೊಂಡು ತಮಗೆ ಆಶ್ರಯ ನೀಡಿದ್ದ ರಾಜರನ್ನು, ಪೋಷಕರನ್ನು ಹಾಡಿ ಹೊಗಳುವ, ಅವರನ್ನು ಕೃತಿಯ ನಾಯಕರೊಂದಿಗೆ ಸಮೀಕರಿಸುವ ಸಂಪ್ರದಾಯವಿತ್ತು. ಈ ಕಾವ್ಯಗಳ ಶ್ರೋತೃವರ್ಗವೂ ಆಸ್ಥಾನ ಪಂಡಿತರು, ವಿದ್ವನ್ಮಂಡಳಿಯೇ ಆಗಿರುತ್ತಿತ್ತು. ಛಂದಸ್ಸು, ಅಲಂಕಾರ, ಭಾಷೆ, ವರ್ಣನೆ ಎಲ್ಲವೂ ಪಂಡಿತೋತ್ತಮರನ್ನು ಉದ್ದೇಶದಲ್ಲಿ ಇಟ್ಟುಕೊಂಡು ರಚಿಸಿದ ಮಾರ್ಗಕೃತಿಗಳಾಗಿದ್ದವು. ವಡ್ಡಾರಾಧನೆ, ಧರ್ಮಾಮೃತದಂತಹ ಕೆಲವು ಕೃತಿಗಳು ಅಪವಾದವಾಗಿದ್ದವು.

ವಚನ ಸಾಹಿತ್ಯ ಹಿಂದಿನ ಕೃತಿಗಳಿಂದ ಬೇರೆಯಾಗಿದ್ದು ಗದ್ಯವೂ ಅಲ್ಲದ, ಪೂರ್ಣಪದ್ಯವೂ ಅಲ್ಲದ ವಿಶಿಷ್ಟ ಲಯಗಾರಿಕೆಯಿಂದ ಕೂಡಿದ ಮುಕ್ತಛಂದಸ್ಸಿನಿಂದ ಕೂಡಿದ ಬಿಡಿಬಿಡಿ

ಕೃತಿಗಳಾಗಿವೆ. ವಚನಕಾರರಿಗೆ ಇಲ್ಲಿ ಛಂದಸ್ಸಿನ ನಿರ್ಬಂಧಗಳಿಲ್ಲದೆ ತಮಗೆ ಅನಿಸಿದ್ದನ್ನು ಮುಕ್ತವಾಗಿ ಅಭಿವ್ಯಕ್ತಿಸಲು, ನಿರೂಪಿಸಲು ಸ್ವಾತಂತ್ರ್ಯವಿದೆ. ವೈಯಕ್ತಿಕ ಆಲೋಚನೆ, ಅಭಿಪ್ರಾಯ, ಅನುಭವ, ಅನುಭಾವ ಮತ್ತು ಭಾವನೆಗಳನ್ನು ಅಭಿವ್ಯಕ್ತಿ ಮಾಡಲು ಪೂರ್ಣ ಅವಕಾಶ ದೊರೆಯಿತು. ಡಾ.ಎಂ. ಚಿದಾನಂದಮೂರ್ತಿಯವರು ಹೇಳುವಂತೆ 'ಕನ್ನಡ ಸಾಹಿತ್ಯಕ್ಕೆ ವೈಯಕ್ತಿಕ ಪ್ರಪಂಚ ಬಂದದ್ದೇ ವಚನಕಾರರಿಂದ'. ಪೂರ್ಣಗ್ರಾಂಥಿಕವೂ ಅಲ್ಲದ, ಪೂರ್ಣ ಆಡುಭಾಷೆಯೂ ಅಲ್ಲದ ಒಂದು ವಿಶಿಷ್ಟ ಹದವಾದ ಕನ್ನಡ 'ನುಡಿಗಡಣ'ವನ್ನು ಸಂವಹನಕ್ಕೆ ಬಳಸಿದರು. ರಾಜಸ್ಥಾನದ ಪ್ರೌಢಭಾಷಾ ಸಾಹಿತ್ಯವನ್ನು ಜನಭಾಷೆಯ ಸಾಹಿತ್ಯವಾಗಿ, ಸಮಾಜದ ಎಲ್ಲ ವರ್ಗವನ್ನು ತಲುಪಬಹುದಾದ ಸಾಹಿತ್ಯವಾಗಿ ರೂಪಾಂತರಿಸಿದರು. ವಚನಕಾರರ ಚಿಂತನೆ, ಧರ್ಮಜಿಜ್ಞಾಸೆ, ಆತ್ಮವಿಮರ್ಶೆ, ಆತ್ಮನಿವೇದನೆ, ಸಮಾಜಚಿಂತನೆ, ಅನುಭಾವ, ಆತ್ಮಸಾಕ್ಷಾತ್ಕಾರ, ಅಸಹಾಯಕತೆ, ದೈನ್ಯಭಾವ, ಸಂತೃಪ್ತಿ ಮುಂತಾದ ವಿಷಯಗಳು ಅಸಾಧಾರಣ ಪ್ರತಿಭೆಯಿಂದ ವಚನಾಭಿವ್ಯಕ್ತಿಯಲ್ಲಿ ಮೂಡಿಬಂದಿವೆ. ಭಿನ್ನ ಭಿನ್ನ ಸಾಮಾಜಿಕ ಸ್ತರಗಳಿಂದ, ಭಿನ್ನ ಭಿನ್ನ ಪ್ರದೇಶಗಳಿಂದ ಬಂದು ಕಲ್ಯಾಣದಲ್ಲಿ ಸೇರಿದ ಸ್ತ್ರೀ ಪುರುಷರು ಐಕ್ಯೈಕ ಘನೋದ್ದೇಶದಿಂದ ಏಕಮುಖವಾಗಿ ಚಲಿಸಿ, ಚಿಂತಿಸಿ ನಡೆನುಡಿಗಳೊಂದಾಗಿ 'ಒಲಿದಂತೆ ಹಾಡಿದ' ವಚನ ಸಾಹಿತ್ಯ ಜಾಗತಿಕ ಸಾಹಿತ್ಯದಲ್ಲೇ ಅತ್ಯಂತ ವಿರಳ ಹಾಗೂ ಅನನ್ಯ. ವಚನ ಸಾಹಿತ್ಯ ಧರ್ಮ ಗ್ರಂಥಗಳೂ ಹೌದು; ಸಾಹಿತ್ಯ ಕೃತಿಗಳೂ ಹೌದು.

**೨. ಶರಣ ಚಳವಳಿ ಮುಖಾಮುಖಿಯಾದ ಮುಖ್ಯ ಅಂಶಗಳು ನಿಮ್ಮ ಅಭಿಪ್ರಾಯದಲ್ಲಿ ಯಾವುವು?**

**ಉತ್ತರ:** ಸಾಂಪ್ರದಾಯಿಕವಾದ ಧಾರ್ಮಿಕ, ಸಮಾಜಿಕ, ಲಿಂಗಭೇದ-ತಾರತಮ್ಯ, ದೇವಾಲಯ ವ್ಯವಸ್ಥೆ, ಜಾತಿ ಭೇದ, ಅಸ್ಪೃಶ್ಯತೆ, ಪೂಜಾವಿಧಾನ ಮುಂತಾದ ಹಲವಾರು ಅಂಶಗಳು ಹೆಜ್ಜೆ ಹೆಜ್ಜೆಗೆ ಶರಣರಿಗೆ ಮುಖಾಮುಖಿಯನ್ನು ತಂದೊಡ್ಡಿದವು.

ಸಾಂಪ್ರದಾಯಿಕ ಶಿವಭಕ್ತಿಯಲ್ಲಿ ಸ್ಥಾವರ ದೇವಾಲಯಗಳಿಗಿದ್ದ ಮಹತ್ವ, ಸಾಮಾನ್ಯ ಜನರನ್ನು ಬಡ, ದಲಿತ ಭಕ್ತರನ್ನು ದೇವಾಲಯದಿಂದ ದೂರವೇ ಇರಿಸಿದ್ದವು. ಹೀಗಾಗಿ ದೇವಾಲಯ ಸಂಸ್ಕೃತಿಯನ್ನೇ ತಿರಸ್ಕರಿಸುವ ಇಷ್ಟಲಿಂಗದ ಸರಳ ಪೂಜೆಗೆ ಮಹತ್ವ ನೀಡುವ ಭಕ್ತಿವಿಧಾನಕ್ಕೆ ಒತ್ತುಕೊಟ್ಟರು. ದೇಹವನ್ನೇ ದೇವಾಲಯವಾಗಿ ಪರಿಭಾವಿಸುವ ಬಸವಣ್ಣನವರ ಪ್ರಸಿದ್ಧ ವಚನವೇ ಇದೆ. ಲಿಂಗಭೇದವಿಲ್ಲದೆ, ಎಲ್ಲ ಶರಣಧರ್ಮೀಯರೂ ಅನುಸರಿಸಬಹುದಾದ ಇಷ್ಟಲಿಂಗ ಪೂಜೆಗೆ ಹೆಚ್ಚು ಅವಕಾಶ ಕಲ್ಪಿಸಲಾಯಿತು. ಧರ್ಮ ಪ್ರಸಾರ ವಿಶಾಲವಾಗಿ ಹರಡಿತು.

ಸಾಮಾಜಿಕ ಜೀವನದಲ್ಲಿ ಸ್ತ್ರೀ-ಪುರುಷರ ಭೇದಭಾವ ಇದ್ದಿತು. ಸಾಂಪ್ರದಾಯಿಕ ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯರನ್ನು ದ್ವಿತೀಯ ದರ್ಜೆ ಪ್ರಜೆಗಳಂತೆ ಕಾಣುತ್ತಿದ್ದ ಸಮಾಜದಲ್ಲಿ ಜೇಡರದಾಸಿಮಯ್ಯ ಮತ್ತು ಮುಂದಿನ ಎಲ್ಲ ವಚನಕಾರರು ಸ್ತ್ರೀ ಮತ್ತು ಪುರುಷರಲ್ಲಿ ದೈಹಿಕ ರಚನೆಯ ಭೇದವೇ ಹೊರತು ಆತ್ಮಕ್ಕೆ ಭೇದವಿಲ್ಲವೆಂದು ಸ್ಪಷ್ಟವಾಗಿ ಹೇಳಿ ಸಾಂಪ್ರದಾಯಿಕ ಜಡನಿಲವನ್ನು ತಿರಸ್ಕರಿಸಿದರು. ಜಾತಿ ತಾರತಮ್ಯ ಭಾರತಕ್ಕೆ ಬಹುಕಾಲದಿಂದ ಅಂಟಿಬಂದಿದ್ದ ಕಳಂಕವಾಗಿತ್ತು. ಅದನ್ನು ತಿರಸ್ಕರಿಸಿ ಹುಟ್ಟಿನಿಂದ ಬ್ರಾಹ್ಮಣನಾಗಿರಲಿ, ಕ್ಷತ್ರಿಯನಾಗಿರಲಿ, ವೈಶ್ಯನಾಗಿರಲಿ, ಶೂದ್ರನಾಗಿರಲಿ, ಅಸ್ಪೃಶ್ಯನಾಗಿರಲಿ ಎಲ್ಲರೂ ಮಾನವರಾಗಿ ಒಂದೇ, ಇದರಲ್ಲಿ ತರತಮವಿಲ್ಲದಂತೆ ಘೋಷಿಸಿದರು. ಕೂಡಿಬಾಳಲು ಯಾವ



ಅಡ್ಡಿಯೂ ಇರಕೂಡದು, ಸಹಭೋಜನದಲ್ಲಾಗಲ್ಲೂ, ರಕ್ತಸಂಬಂಧ ಬೆಳೆಸುವುದರಲ್ಲಾಗಲೀ ಅಡ್ಡಿ ಬರಬಾರದೆಂಬ ದಿಟ್ಟ ನಿಲವನ್ನು ತಳೆದರು. ಹಾಗೆಯೇ ಹರಳಯ್ಯ ಮಧುವಯ್ಯರ ಮಕ್ಕಳ ಮದುವೆಯ ಮೂಲಕ ತತ್ವವನ್ನು ದಿಟ್ಟವಾಗಿ ಆಚರಣೆಗೂ ತಂದರು. ಈ ಘಟನೆ ಸಾಂಪ್ರದಾಯಿಕ ಸಮಾಜಕ್ಕೆ ಬಹುದೊಡ್ಡ ಆಘಾತವನ್ನು ತಂದಿರಬೇಕು. ಆ ಕಾಲದ ಬಹು ದೊಡ್ಡ ವಿಘಟನೆಗೆ ಅದು ಕಾರಣವಾದದ್ದು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ.

ಶರಣರು ಇಹದ ಬದುಕಿಗೆ ಪ್ರಾಮುಖ್ಯ ಕೊಟ್ಟರು; ಪರಲೋಕವೂ ಅಪ್ರಮುಖವಲ್ಲ. ಇಲ್ಲಿ ಯೋಗ್ಯವಾದ ಬದುಕು ನಡೆಸಿದರೆ ಅಲ್ಲಿಯೂ ಯೋಗ್ಯತೆ ದೊರೆಯುತ್ತದೆ. ಅದನ್ನೇ ಬಸವಣ್ಣನವರು ಮರ್ತ್ಯವೆಂಬುದು ಕರ್ತಾರನ ಕಮ್ಮಟವೆಂದು ಕರೆದದ್ದು. ಸ್ವರ್ಗನರಕಗಳು ಕಾಲ್ಪನಿಕ ಲೋಕಗಳು ಅವುಗಳು ಅಮುಖ್ಯ. ಶುಭಗಳಿಗೆ, ಪುಣ್ಯಕ್ಷೇತ್ರ ಪರ್ಯಟನೆ, ವೃತ್ತಿಗಳಲ್ಲಿದ್ದ ತಾರತಮ್ಯ ಮುಂತಾದವುಗಳನ್ನು ಸ್ಪಷ್ಟವಾಗಿ ನಿಷ್ಠುರವಾಗಿ ವಿರೋಧಿಸಿದರು. ಶರಣರು ದಾಂಪತ್ಯ ಜೀವನವನ್ನು ವಿಶೇಷವಾಗಿ ಪುರಸ್ಕರಿಸಿದರು. 'ಸತಿಪತಿಗಳೊಂದಾದ ಭಕ್ತಿ ಹಿತವಪ್ಪುದು ಶಿವಂಗೆ' ಎಂಬ ಮಾತು ಶರಣರು ದಾಂಪತ್ಯ ಜೀವನಕ್ಕೆ ಹಾಕಿಕೊಟ್ಟ ಹೆಬ್ಬಾಗಿಲಾಗಿದೆ. ಕಾಯಕತತ್ವ ಸಮಾಜದಲ್ಲಿ ವ್ಯಕ್ತಿ ಗೌರವವನ್ನು, ಆರ್ಥಿಕ ನೆಲೆಗಟ್ಟನ್ನು, ದಾಸೋಹ ಭಾವವನ್ನು ಮುಪ್ಪುರಿಗೊಳಿಸಿ ಸ್ವಾಸ್ಥ್ಯ ಸಮಾಜಕ್ಕೆ ಮುನ್ನುಡಿ ಬರೆಯಿತು.

**೩. ಅಲ್ಲಮಪ್ರಭು ಶರಣ ಚಳವಳಿಯಲ್ಲಿ ಒಂದು ನಡುಗಡ್ಡೆಯಂತೆ ಕಾಣಲು ಕಾರಣಗಳೇನು?**

**ಉತ್ತರ:** ಅಲ್ಲಮ ಪ್ರಭು ಹನ್ನೆರಡನೆಯ ಶತಮಾನದ ಮಹಾಜ್ಞಾನಿ. ತನ್ನ ಅಪಾರ ಲೋಕಾನುಭವ, ಜ್ಞಾನ, ಅನುಭಾವ, ಚುಂಬಕ ವ್ಯಕ್ತಿತ್ವದಿಂದ ಎಲ್ಲ ಶರಣರಿಗಿಂತ ಭಿನ್ನಸ್ತರದ ವ್ಯಕ್ತಿ; ಶರಣ ಲೋಕದ ಅದಮ್ಯ, ಅಸದೃಶ ಚೈತನ್ಯ ಶಕ್ತಿ. ಅಷ್ಟೇ ನಿಗೂಢವೂ ಹೌದು. ಹುಟ್ಟಿನಿಂದ ಮೇಲ್ವರ್ಗಕ್ಕೆ ಸೇರದವನಾದರೂ ತನ್ನ ಅಸಾಧಾರಣ ಸಾಧನೆಯಿಂದ ಅನುಭಾವದ ಶಿಖರವನ್ನು ಮುಟ್ಟಿದವನು. ಅಲ್ಲಮ ತನ್ನ ಮೊದಲ ಘಟ್ಟದ ಬದುಕಿನಲ್ಲಿ ಸಾಂಸಾರಿಕ ಆಕರ್ಷಣೆಗೆ ಸಿಲುಕಿದರೂ ಮುಂದಿನ ಹಂತದಲ್ಲಿ ಆ ಕಡೆಯೂ ತಿರುಗಿ ನೋಡದೆ ಸಾಧನೆಯ ಪಥದಲ್ಲಿ ಮುನ್ನುಗ್ಗಿದವನು. ಅವನ ಸಾಧನೆಯನ್ನು ಗಮನಿಸಿದ ಮುಂದಿನ ತಲೆಮಾರಿನ ಕವಿಗಳು ಅವನು ಒಂದು ಘಟ್ಟದಲ್ಲಿ ಸ್ತ್ರೀ ಆಕರ್ಷಣೆಗೆ ಸಿಲುಕಿದವನು ಎಂಬುವುದನ್ನು ನಂಬುವುದಕ್ಕೆ ಸಾಧ್ಯವಿಲ್ಲ ಎಂದು ನಂಬುವಂತೆ ಆಗಿ ಅವನು ಹುಟ್ಟುತ್ತಲೇ ಪರಮವೈರಾಗ್ಯವಂತ ಎಂಬಂತೆ ಚಿತ್ರಿಸಿದರು. ಲೌಕಿಕದ ತೊಳಲಾಟಗಳಲ್ಲಿ ಸಿಲುಕಿದ ಮುಕ್ತಾಯಕ್ಕ, ಅಕ್ಕಮಹಾದೇವಿ, ಸಿದ್ಧರಾಮ, ಗೋರಕ್ಷ ಮುಂತಾದವರನ್ನು ಸಮಾಧಾನಿಸಿ ಮುಕ್ತಿಪಥವನ್ನು ತೋರಿಸುತ್ತಾನೆ. ಅಲ್ಲಮನ ವೈಚಾರಿಕ ಜಗತ್ತು ಅತ್ಯದ್ಭುತವಾದದ್ದು. ಅವನ ಪ್ರಶ್ನಿಸುವ ಗುಣ ಅವನ ವ್ಯಕ್ತಿತ್ವದ ಅವಿಭಾಜ್ಯ ಅಂಗವಾಗಿತ್ತು. ದೇವರು, ಧರ್ಮ, ಆಚರಣೆ, ನಂಬಿಕೆ, ಸಂಪ್ರದಾಯ ಮುಂತಾದವುಗಳನ್ನು ಸಂದೇಹದಿಂದಲೇ ನೋಡಿ ವಿಶ್ಲೇಷಿಸುವ ಮನೋಭಾವದವನು. 'ಮರ್ತ್ಯಲೋಕದ ಮಾನವರು ದೇಗುಲದೊಳಗೊಂದು ದೇವರ ಮಾಡಿದಡೆ ಆನು ಬೆರಗಾದೆನು' ಎಂದು ಹೇಳಿ ಸಂಪ್ರದಾಯವಾದಿಗಳನ್ನು ಚಕಿತಗೊಳಿಸುತ್ತಾನೆ. ಅವನ ವಚನಗಳಲ್ಲಿ ಅನೇಕವು ಬೆಡಗಿನ ರಚನೆಗಳಾಗಿವೆ; ಅನುಭಾವದ ಚಿಂತನೆಗಳಿಗೆ ಅಭಿವ್ಯಕ್ತಿಕೊಡುವಾಗ ಸಹಜವಾಗಿ ಲೌಕಿಕಾಭಿವ್ಯಕ್ತಿಯಿಂದ ಭಿನ್ನವಾಗಿಯೇ ಇರಲು ಸಾಧ್ಯ. ಅವನದು ಒಂದು ರೀತಿಯ ಮುಕ್ತಾವಸ್ಥೆಯ ಬದುಕು. ಬದುಕಿಗೆ ಅಂಟಿಯೂ ಅಂಟದಂತೆ ಅವನ ಸಾಧನಾಪಥ.

ಹೀಗಾಗಿ ಯಾರ ಮುಲಾಜಿಗೂ, ಯಾವ ಮುಲಾಜಿಗೂ ಸಿಕ್ಕಿಹಾಕಿಕೊಳ್ಳದ, ಯಾರನ್ನೂ ಮೆಚ್ಚಿಸುವ, ಓಲೈಸುವ ಮನೋಭಾವ ಲವಲೇಶವೂ ಇಲ್ಲದ ವ್ಯಕ್ತಿತ್ವದ ಸಿದ್ಧಿ ಅವನದು. ಅವನ ವಚನಗಳು ಗಾತ್ರದಲ್ಲಿ ಕಿರಿಯವು ಅರ್ಥದಲ್ಲಿ ಹಿರಿಯವು. ಲೋಕಾನುಭವದ ಸಾರವಿದೆ, ಅನುಭಾವದ, ಆಧ್ಯಾತ್ಮದ ಗಾಢ, ಗೂಢವಲಯಗಳನ್ನು ಪ್ರವೇಶಿಸುವ ಅಲ್ಲಮನ ಚಿಂತನೆಗಳು ತಮ್ಮ ವಿಶಿಷ್ಟ ವಿಶೇಷತೆಗಳಿಂದ ಓದುಗರನ್ನು ಬಹಳಷ್ಟು ಸಾರಿ ವಿಸ್ಮಯದಲ್ಲಿ ನಿಲ್ಲಿಸುತ್ತವೆ. ಇಡೀ ಶರಣ ಚಳವಳಿಯಲ್ಲಿ ಗುಂಪಿನಲ್ಲಿದ್ದೂ ಏಕಾಂಗಿಯಂತೆ ಕಾಣುವ ಅಲ್ಲಮನ ವ್ಯಕ್ತಿತ್ವ ಅದ್ವಿತೀಯ ಹಾಗೂ ಅನುಪಮ.

**೪. ಉಳಿದ ಶರಣರಿಗಿಂತ ಬಸವಣ್ಣನಿಗೆ ಇದ್ದ ವಿಶೇಷ ಆಕರ್ಷಣೆಗಳಾವುವು? ಇವು ಚಳವಳಿಗೆ ದೊರಕಿಸಿದ ಲಾಭಾಂಶಗಳಾವುವು?**

**ಉತ್ತರ:** ಬಸವಣ್ಣ ಹನ್ನೆರಡನೆಯ ಶತಮಾನದ ಇಡೀ ಶರಣ ಚಳವಳಿಯ ಕೇಂದ್ರಬಿಂದು ಎಂದರೆ ಅದು ಉತ್ಪ್ರೇಕ್ಷೆ ಅಲ್ಲ. ಬಸವಣ್ಣ ತನ್ನ ಅಸಾಧಾರಣ ಮಾನವೀಯತೆ, ಅನನ್ಯಭಕ್ತಿ, ಸನ್ನಡತೆ, ವಿಧೇಯತೆಗಳಿಂದ ಕೂಡಿದ ಪರಿಪಕ್ವ ವ್ಯಕ್ತಿ. ಬಸವಣ್ಣನ ವ್ಯಕ್ತಿತ್ವದ ಪ್ರಭೆ ಅತ್ಯಂತ ಗಾಢವಾದದ್ದು. ಸಮಕಾಲೀನ ಶರಣರು ಮುಂದಿನ ಶರಣಪರಂಪರೆಯ ಎಲ್ಲ ವಚನಕಾರರು ಮತ್ತು ಕವಿಗಳು ವಿಶೇಷ ರೀತಿಯಲ್ಲಿ, ಆತ್ಮೀಯತೆಯಿಂದ ಬಸವಣ್ಣನವರ ಗುಣಗಾನ ಮಾಡಿದ್ದಾರೆ. ಹನ್ನೆರಡನೆಯ ಶತಮಾನದಿಂದ ೨೦ನೆಯ ಶತಮಾನದವರೆಗೆ ಕವಿಗಳು ಬಸವಣ್ಣನವರ ಅಸಾಧಾರಣ ವ್ಯಕ್ತಿತ್ವಕ್ಕೆ ಮನಸೋತಿದ್ದಾರೆ.

ಬಸವಣ್ಣ ಹೊರಜಗತ್ತಿಗೆ ಬಿಜ್ಜಳನ ಭಂಡಾರದ ಅಧಿಕಾರಿ, ಚಳವಳಿಯ ಸೂತ್ರಧಾರಿ ಬಹುದೊಡ್ಡ ಜನಾಕರ್ಷಕ ಬಿಂದು. ಅವರ ಖ್ಯಾತಿಯಿಂದಲೇ ಕನ್ನಡ ನಾಡಿನ ಬೇರೆ ಬೇರೆ ಭಾಗಗಳಿಂದ, ಅನ್ಯರಾಜ್ಯಗಳಿಂದ ದೂರದ ಕಾಶ್ಮೀರದಿಂದಲೂ ಜನರು ಆಗಮಿಸಿ ಕಲ್ಯಾಣದಲ್ಲಿ ನೆಲೆ ನಿಂತದ್ದು ಇತಿಹಾಸದ ವಿರಳ ಘಟನೆ. ಸಾಮಾಜಿಕವಾಗಿ ಉನ್ನತ ಅಧಿಕಾರದಲ್ಲಿದ್ದ ರಾಜ–ರಾಣಿಯರು, ವಿವಿಧ ವೃತ್ತಿಯವರು, ಪಂಡಿತರು, ಎಲ್ಲ ವರ್ಗ, ಎಲ್ಲ ಜಾತಿಯ ಜನರು ಕಲ್ಯಾಣಕ್ಕೆ ಹರಿದು ಬಂದರು. ಒಂದು ನದಿಗೆ ಬಂದು ಸೇರುವ ಉಪನದಿಗಳಂತೆ, ಹಳ್ಳಕೊಳ್ಳ, ತೊರೆಗಳಂತೆ ನಾನಾ ದಿಕ್ಕಿನಿಂದ ಬಂದು ಸೇರಿದ್ದು ಅದ್ಭುತ ಘಟನೆ. ಬಸವಣ್ಣನವರ ಭಕ್ತಿ, ವಿನಯ, ಮಾನವೀಯತೆ, ಅನುಕಂಪತೆ, ಜಾತ್ಯಾತೀತ ಮನೋಭಾವ, ತಾಳ್ಮೆ, ಸೌಹಾರ್ದ ಗುಣಗಳು ಚುಂಬಕ ಶಕ್ತಿಯಾಗಿ ಸೆಳೆದಿವೆ. ಭಿನ್ನಭಿನ್ನ ಸಾಮಾಜಿಕ ವಲಯದ, ಭಿನ್ನ ಭಿನ್ನ ಜಾತಿಗಳ, ಸ್ತ್ರೀಪುರುಷ ಭೇದವಿಲ್ಲದೆ ಏಕೈಕ ಘನೋದ್ದೇಶದಿಂದ ಸೇರಿ, ಚಳವಳಿಯಲ್ಲಿ ಭಾಗವಹಿಸಿದ್ದು ನಾಡಿನ ಇತಿಹಾಸದಲ್ಲೇ ಅನನ್ಯ. ಆ ಕಾಲದ ಅಸಾಧಾರಣ ಪ್ರತಿಭೆಗಳಾದ ಅಲ್ಲಮ, ಚೆನ್ನಬಸವಣ್ಣ, ಸಿದ್ಧರಾಮ, ಅಕ್ಕಮಹಾದೇವಿ, ಮುಕ್ತಾಯಕ್ಕ, ಅಂಬಿಗರ ಚೌಡಯ್ಯ, ಉರಿಲಿಂಗದೇವ, ಒಕ್ಕಲಿಗ ಮುದ್ದಣ್ಣ, ತುರುಗಾಹಿ ರಾಮಣ್ಣ, ನುಲಿಯ ಚಂದಯ್ಯ, ಮಡಿವಾಳ ಮಾಚಯ್ಯ, ಮೇದರ ಕೇತಯ್ಯ, ಹೆಂಡದ ಮಾರಯ್ಯ, ಆಯ್ದಕ್ಕಿ ಲಕ್ಕಮ್ಮ, ಗಂಗಾಂಬಿಕೆ, ಮೋಳಿಗೆ ಮಹಾದೇವಿ ಹೀಗೆ ಶರಣರ ಪಟ್ಟಿ ಉದ್ದುದ್ದ ಬೆಳೆಯುತ್ತದೆ. ಬಸವಣ್ಣನವರ ಆಕರ್ಷಕ ವ್ಯಕ್ತಿತ್ವ ಇಡೀ ಸಂಘಟನೆಗೆ ಬಹುದೊಡ್ಡ ಬಲವನ್ನು ನೀಡಿತು. ತಮ್ಮ ನಡೆ–ನುಡಿಯಿಂದ ಅಚ್ಚಳಿಯದ ಪ್ರಭಾವವನ್ನು ಬೀರಿ ಎಲ್ಲರನ್ನೂ ಮನಃಪೂರ್ವಕವಾಗಿ ಶರಣಚಳವಳಿಯಲ್ಲಿ ಭಾಗವಹಿಸುವಂತೆ ಮಾಡಿ ತಮ್ಮ ಬದುಕಿನ ಕಾಲದಲ್ಲೇ ಜೀವಂತ



ದಂತಕಥೆಯಾದರು. ಧಾರ್ಮಿಕ, ಸಾಮಾಜಿಕ ಪರಿವರ್ತನೆಯಲ್ಲಿ ಶರಣ ಸಮೂಹವನ್ನು ತೊಡಗಿಸಿ ನವಸಮಾಜ ನಿರ್ಮಾಣಕ್ಕೆ ನಾಂದಿ ಹಾಡಿದರು.

ಬಸವಣ್ಣನವರಂತೆ ಆತ್ಮವಿಮರ್ಶೆಯನ್ನು ನಿಷ್ಠುರವಾಗಿ ಮಾಡಿಕೊಂಡವರು ಸಾಹಿತ್ಯ ಇತಿಹಾಸದಲ್ಲಿಯೇ ವಿರಳ. ಅವರಂತೆ ತಮ್ಮ ಹುಟ್ಟಿನಿಂದ ಬಂದ ಸಾಮಾಜಿಕ ಸ್ತರವನ್ನು ನಿರಾಕರಿಸಿದವರು ಬಹುಶಃ ಇತಿಹಾಸದಲ್ಲಿಯೇ ಇಲ್ಲ. ಅವರು ಅಸ್ಪೃಶ್ಯ ವರ್ಗ ತನ್ನ ಹುಟ್ಟಿನ ಶ್ರೇಷ್ಠತೆಯ ಕಾರಣದಿಂದಲೇ ತಮ್ಮ ಆಪ್ತವಲಯದಲ್ಲಿ ಸ್ಥಾನ ಕೊಡುತ್ತಿಲ್ಲವೆಂದು ತಾವು ಅಸ್ಪೃಶ್ಯ ಕುಟುಂಬ ವರ್ಗದ ಅನ್ಯೈತಿಕ ಸಂತಾನವೆಂಬಷ್ಟು ತಮ್ಮನ್ನು ತಾವು ಅತ್ಯಂತ ಕೆಳಸ್ತರದಲ್ಲಿ ಇಟ್ಟುಕೊಳ್ಳುವ ಗರಿಷ್ಠ ಮಟ್ಟಕ್ಕೂ ಹೋಗಿರುವುದು ಅವರ ಸಾಮಾಜಿಕ ನೈಜಕಳಕಳಿಯನ್ನು ಹಾಗೂ ಮಾನಸಿಕವಾಗಿ ಅವರು ಏರಿದ ಔನ್ನತ್ಯವನ್ನೂ ತೋರಿಸುತ್ತದೆ.

ಬಸವಣ್ಣನವರ ಚುಂಬಕ ವ್ಯಕ್ತಿತ್ವ ತನ್ನ ಕಾಲದ ಎಲ್ಲ ಶ್ರೇಷ್ಠ ವ್ಯಕ್ತಿಗಳನ್ನು ಕಲ್ಯಾಣಕ್ಕೆ ಸೆಳೆದುಕೊಂಡು ಒಂದು ಯಶಸ್ವೀ ಅಸಾಧಾರಣ ಇತಿಹಾಸ ಪ್ರಸಿದ್ಧ ಚಳವಳಿಗೆ ಕಾರಣವಾಯಿತು.

**೫. ವಚನ ಸಾಹಿತ್ಯದ ಪ್ರಥಮ ಘಟ್ಟ ಮತ್ತು ದ್ವಿತೀಯ ಘಟ್ಟಗಳು ಹೇಗೆ ಭಿನ್ನ? ಏಕೆ ಭಿನ್ನ?**

**ಉತ್ತರ:** ಹನ್ನೆರಡನೆಯ ಶತಮಾನದ ಶರಣ ಚಳವಳಿಯನ್ನು ವಚನ ಸಾಹಿತ್ಯದ ಪ್ರಥಮ ಘಟ್ಟವೆಂದು ಗುರುತಿಸಲಾಗುತ್ತದೆ. ಆ ಕಾಲದ ನೂರಾರು ಶರಣರು ಲಿಂಗ ಭೇದವಿಲ್ಲದೆ ತಮ್ಮ ವೈಯಕ್ತಿಕ ಅನುಭಾವಿಕ ಸಾಧನೆಯ ಜೊತೆಗೆ ನವ ಸಮಾಜ ನಿರ್ಮಾಣಕ್ಕೆ ಪಣತೊಟ್ಟು ಹೋರಾಡಿದರು. ಈ ಹೋರಾಟದ ಉಪಉತ್ಪನ್ನವಾಗಿ ವಚನ ಸಾಹಿತ್ಯ ಮೂಡಿಬಂದಿತು. ಬಸವಾದಿ ಶರಣರ ವಚನ ರಚನೆಯಲ್ಲಿ ಜೀವಂತಿಕೆ, ಮಾನವೀಯತೆ, ಚಿಂತನೆಯ ವೈವಿಧ್ಯ, ಕ್ರಿಯಾತ್ಮಕ ಪ್ರತಿಭಟನೆ, ಸಮರ್ಪಣೆ, ಸಮರ್ಪಣಭಾವ, ಅಸಹಾಯಕತೆ, ಆಸೆ–ನಿರಾಸೆ, ಹಂಬಲ, ತೊಳಲಾಟ, ಅನುಭಾವ, ಆತ್ಮಚಿಂತನೆ, ಸಾಮಾಜಿಕ ಚಿಂತನೆ ಇಂಥ ಹಲವು ಹತ್ತು ವಿಷಯಗಳು ವಚನ ಸಾಹಿತ್ಯದಲ್ಲಿ ಅಭಿವ್ಯಕ್ತಿ ಪಡೆದಿವೆ. ವಚನಕಾರರಲ್ಲಿ ಪರಸ್ಪರ ಪ್ರಭಾವಗಳಿಗೆ ಒಳಗಾದರೂ ಅನನ್ಯತೆಗಳನ್ನು ಉಳಿಸಿಕೊಂಡಿದ್ದಾರೆ. ಈ ಎಲ್ಲ ಅಂಶಗಳು ವಚನಸಾಹಿತ್ಯಕ್ಕೆ ಸೃಜನಾತ್ಮಕ ಚೈತನ್ಯವನ್ನೂ ತಂದುಕೊಟ್ಟಿವೆ. ಈ ಎಲ್ಲ ವಚನ ರಚನೆಯ ಹಿಂದೆ ಒಂದು ಸೃಜನಾತ್ಮಕ ತುರ್ತು, ಅನಿವಾರ್ಯತೆ ಕಾರ್ಯ ನಿರ್ವಹಿಸಿರುವುದನ್ನು ಮೊದಲ ಘಟ್ಟದ ರಚನೆಯಲ್ಲಿ ಎದ್ದು ಕಾಣುತ್ತದೆ.

ದ್ವಿತೀಯ ಘಟ್ಟದ ವಚನ ಸಾಹಿತ್ಯವನ್ನು ಬಸವೋತ್ತರ ವಚನ ಸಾಹಿತ್ಯವೆಂದೂ ಕರೆಯುವುದು ರೂಢಿಯಲ್ಲಿದೆ. ಇದರ ಕಾಲಾವಧಿ ೧೫ನೆಯ ಶತಮಾನದಿಂದ ಮುಂದಿನ ಕಾಲ ಅಂದರೆ ಆಧುನಿಕ ಕಾಲದವರೆಗೆ ಹರಡಿದೆ. ಈ ಕಾಲಘಟ್ಟದ ವಚನ ಸಾಹಿತ್ಯ ಧಾರ್ಮಿಕ ಚಲನಶೀಲತೆಗಿಂತಲೂ ಸಾಂಸ್ಥಿಕ ರೂಪವನ್ನು ಪಡೆಯಲು ಪುನರುಜ್ಜೀವನದ ಕಡೆ ಚಲಿಸಿದೆ. ಈ ಕಾಲದ ವಚನ ರಚನೆಯಲ್ಲಿ ತಟ್ಟನೆ ಎದ್ದು ಕಾಣುವುದು ಸ್ತ್ರೀಯರ ಭಾಗವಹಿಸುವಿಕೆ ಇಲ್ಲ ಎಂಬಂತಾಗಿರುವುದು. ಪರಿಷ್ಕರಣೆ, ಸಂಪಾದನೆ ಮತ್ತು ವ್ಯಾಖ್ಯಾನಗಳ ಕಡೆ ಒಲಿದಿದೆ. ಈ ಘಟ್ಟದಲ್ಲಿ ವೀರಶೈವದ ತಾತ್ವಿಕ ನಿರೂಪಣೆಗೆ ವಚನ ರಚನೆ ಹೆಚ್ಚು ಒಲಿದಿದೆ. ಹೆಚ್ಚಾಗಿ ಮಠಾಧೀಶರೇ, ವಿರಕ್ತಪರಂಪರೆಗೆ ಸೇರಿದ ಅನುಭಾವಿಗಳು ವಚನ ರಚನೆಯಲ್ಲಿ ಹೆಚ್ಚುತೊಡಗಿದ್ದಾರೆ. ವಚನ ರಚನೆಯಲ್ಲಿ ಪರಿಸರ ಸ್ಪಂದನೆಗಿಂತಲೂ ತತ್ವಜಿಜ್ಞಾಸೆ, ಶಾಸ್ತ್ರ ನಿರೂಪಣೆಗೆ ಒಲವು ತೋರಿದೆ. ಕೆಲವರ ವಚನಗಳಲ್ಲಿ ಆತ್ಮವಿಮರ್ಶೆ, ತೊಳಲಾಟದ

ಭಾವ ಕಂಡುಬಂದರೂ ಅದರಲ್ಲಿ ಸಹಜ ಸೃಜನಾತ್ಮಕ ಒತ್ತಡ ಅಷ್ಟಾಗಿ ಕಂಡುಬರುವುದಿಲ್ಲ. ವಚನರಚನೆಯ ನೈಜ ಲವಲವಿಕೆ ಹಿನ್ನೆಲೆಗೆ ಸರಿದು ಶಾಸ್ತ್ರದ ಕಡೆಗೆ ಚಲಿಸಿದೆ. ಭಾವ ಭಾಷೆ, ಹೊಸಲಯಗಳ ಪ್ರಯೋಗ, ಕಲ್ಪನೆ, ಅಭಿವ್ಯಕ್ತಿ ಬಂಧುರ ಹಿನ್ನೆಲೆಗೆ ಸರಿದಿದೆ. ವಚನಗಳಲ್ಲಿ ವಚನಕಾರರು ತಮ್ಮ ಅಭಿಪ್ರಾಯಕ್ಕೆ ಬೆಂಬಲವಾಗಿ ಹೆಚ್ಚು ಸಂಸ್ಕೃತ ಉಕ್ತಿಗಳ ಬೆಂಬಲ ಪಡೆಯಲು ಯತ್ನಿಸಿದ್ದಾರೆ. ಬಸವಣ್ಣ, ಅಲ್ಲಮ ಮುಂತಾದವರಲ್ಲಿ ಕಾಣುವ ಆತ್ಮವಿಮರ್ಶೆ, ವೈಚಾರಿಕ ಗಹನತೆ, ಅಕ್ಕಮಹಾದೇವಿಯಲ್ಲಿ ಕಾಣುವಂತಹ ಆತ್ಮನಿವೇದನೆಗಳು ಈ ಕಾಲದ ವಚನಗಳಲ್ಲಿ ಅಷ್ಟಾಗಿ ಕಂಡುಬರುವುದಿಲ್ಲ. ವಚನದ ಅಂತರಂಗ ಸತ್ವ ಮತ್ತು ಭಾಷಾಭಿವ್ಯಕ್ತಿ ಎರಡರಲ್ಲೂ ಗಟ್ಟಿತನ ಮತ್ತು ನೈಜತೆ ಅಷ್ಟಾಗಿ ಕಂಡುಬರುವುದಿಲ್ಲ. ಮೊದಲನೆಯ ಘಟ್ಟದ ವಚನ ಸಾಹಿತ್ಯ ಅಭ್ಯಾಸಿಗಳನ್ನು ಹಾಗೂ ವಿಮರ್ಶಕರನ್ನು ಸೆಳೆದಂತೆ ದ್ವಿತೀಯ ಘಟ್ಟದ ವಚನ ರಚನೆ ಸೆಳೆದಿಲ್ಲ. ಇವಲ್ಲದೆ ಇನ್ನೂ ಅನೇಕ ಕಾರಣಗಳು ಎರಡು ಘಟ್ಟಗಳನ್ನು ಭಿನ್ನ ನೆಲೆಯಲ್ಲಿ ನಿಲ್ಲಿಸಿವೆ.

ಹನ್ನೆರಡನೆಯ ಶತಮಾನದ ವಚನ ಚಳವಳಿಗೆ ಒದಗಿದ ರಾಜಕೀಯ, ಸಾಂಸ್ಕೃತಿಕ ಹಿನ್ನೆಲೆಗೂ ಮತ್ತು ದ್ವಿತೀಯ ಘಟ್ಟದ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಹಿನ್ನೆಲೆಗೂ ಸಾಕಷ್ಟು ವ್ಯತ್ಯಾಸಗಳಿವೆ. ಹನ್ನೆರಡನೆಯ ಶತಮಾನದ ಜೀವನ ಮತ್ತು ಸಾಹಿತ್ಯಗಳಲ್ಲಿ ಒಂದು ಮೂಲಭೂತ ಪರಿವರ್ತನೆ ಮತ್ತು ಸುಧಾರಣೆಗಳನ್ನು ತರಲೇಬೇಕೆನ್ನುವ ಜರೂರು ಒತ್ತಡ ಕಂಡುಬರುತ್ತದೆ. ಆದರೆ ದ್ವಿತೀಯ ಘಟ್ಟದಲ್ಲಿ ಚದುರಿಹೋಗಿದ್ದ, ಮರೆಯಾಗಿದ್ದ ವಚನ ಸಾಹಿತ್ಯವನ್ನು, ಧರ್ಮವನ್ನು ಒಗ್ಗೂಡಿಸುವ ಪುನರುಜ್ಜೀವನಕ್ಕೆ ಹೆಚ್ಚು ಒತ್ತು ಬಿದ್ದಿರುವುದು ಕಂಡುಬರುತ್ತದೆ. ಬಹುಶಃ ಈ ಕಾರಣದಿಂದಲೇ ಏನೊ ಎರಡನೆಯ ಘಟ್ಟದ ವಚನರಚನೆಗಳು ಮೊದಲನೆಯ ಘಟ್ಟದ ನೆರಳುಗಳಂತೆ, ಪ್ರತಿಧ್ವನಿಗಳಂತೆ, ಕೇವಲ ಹೇಳಿಕೆಗಳಂತೆ, ಜೀವಂತಿಕೆಯ ಸೃಜನಾತ್ಮಕ ತುರ್ತಿನ ಕೊರತೆಯಿಂದಲೂ ಬಳಲುತ್ತಿರುವಂತೆ ಕಂಡುಬರುತ್ತದೆ. ಹೀಗೆ ಅಭಿಪ್ರಾಯಪಟ್ಟ ಮಾತ್ರಕ್ಕೆ ದ್ವಿತೀಯ ಘಟ್ಟದ ಎಲ್ಲ ವಚನ ರಚನೆಗಳು ಸತ್ವರಹಿತವಾದವು ಎಂದು ಭಾವಿಸುವುದು ತಪ್ಪಾಗುತ್ತದೆ. ರಚನೆಗಳಲ್ಲಿ ಭಿನ್ನತೆ ಇದ್ದರೆ, ಭಿನ್ನ ಪ್ರೇರಣೆಗಳು, ಭಿನ್ನ ಸಾಂಸ್ಕೃತಿಕ ಪರಿಸರಗಳು ಕಾರಣಗಳೆಂದು ಭಾವಿಸಬೇಕೇ ಹೊರತು ಪ್ರತಿಭೆಯ ಕೊರತೆಯಿಂದ ಉಂಟಾದುವಲ್ಲವೆಂದು ತಿಳಿಯುವುದು ಅಗತ್ಯ.

■



ಶ್ರೀ ಸಿದ್ಧರಾಮದೇವರು ಶಿವಯೋಗಿಯಾದರೂ ಏಕಾಂತದಲ್ಲಿದ್ದು ಸದಾ ಯೋಗ ಸಾಧನೆಯಲ್ಲಿ ತೊಡಗಿರುವದು ಅವರಿಗೆ ಸಮ್ಮತವಾದ ಮಾರ್ಗವಲ್ಲ. ಮಾನವರ ಮಧ್ಯದಲ್ಲಿದ್ದು ಕಾಯಕದಲ್ಲಿ ನಿರತರಾಗಿ ಜನರಿಗೆ ಸನ್ಮಾರ್ಗ ತೋರಿಸಿ ಅವರನ್ನು ಉದ್ಧಾರ ಮಾಡುವದು ತಮ್ಮ ಕರ್ತವ್ಯವೆಂದು ಅವರು ಭಾವಿಸಿದ್ದರು.

**ಎಲ್.ಜಿ. ಹಿರೇಮಠ**



## ಒಂದು ವಚನ – ಎರಡು ನೋಟ

ಬೆಂಗಳೂರಿನ ಕೃಷಿವಿಶ್ವವಿದ್ಯಾಲಯ ಕನ್ನಡ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿರುವ ಡಾ. ಉಷಾಕಿರಣ್ ವಚನ ಸಾಹಿತ್ಯದಲ್ಲಿ ವಿಶೇಷ ಅಧ್ಯಯನವನ್ನು ಮಾಡಿದವರು; ಬಸವೇಶ್ವರ ಮತ್ತು ಪ್ರತಿಮಾ ನಿರ್ಮಿತಿ, ವಚನಗಳಲ್ಲಿ ಪ್ರತಿಮೆಗಳು, ವಚನ ಸಾಹಿತ್ಯಕ್ಕೆ ಸಂಬಂಧಿಸಿದ ಮುಖ್ಯ ಕೃತಿಗಳು. ಸಸ್ಯ ಸಾಮ್ರಾಜ್ಯ, ಮತ್ಸ್ಯಶಾಸ್ತ್ರ ಮುಂತಾದ ವೈಜ್ಞಾನಿಕ ಅನುವಾದ ಗ್ರಂಥಗಳು ಹಾಗೂ ಶಬ್ದಕೋಶಗಳನ್ನು ಪ್ರಕಟಿಸಿದ್ದಾರೆ. ಸದಾ ಕ್ರಿಯಾಶೀಲರಾಗಿರುವ ಇವರಿಂದ ಹೆಚ್ಚಿನ ವಚನ ಸಂಬಂಧೀ ಕೃತಿಗಳನ್ನು ನಿರೀಕ್ಷಿಸಬಹುದು.

ಕನ್ನಡ ಸಾಹಿತ್ಯ ಚಟುವಟಿಕೆಗಳಲ್ಲಿ ಸದಾ ಕ್ರಿಯಾಶೀಲರಾಗಿರುವ ಡಾ. ನಾಗವೇಂದ್ರ ಚಿದರವಳ್ಳಿ ಅವರು ಮಧ್ಯಕಾಲೀನ ಸಾಹಿತ್ಯದಲ್ಲಿ ಸಂಶೋಧನೆ ಮಾಡಿ ಬೆಂಗಳೂರು ವಿಶ್ವವಿದ್ಯಾಲಯದಿಂದ ಪಿಹೆಚ್.ಡಿ. ಪದವಿಯನ್ನು ಪಡೆದಿದ್ದಾರೆ. ವೆಂಕಟ್ ಇಂಟರ್‌ನ್ಯಾಷನಲ್ ಸ್ಕೂಲಿನಲ್ಲಿ ಕನ್ನಡ ಅಧ್ಯಾಪನ ವೃತ್ತಿಯಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಬರವಣಿಗೆ ಕಾರ್ಯ ಇನ್ನು ಅರಳಬೇಕಿದೆ.

ಎರೆಯಂತೆ ಕರಕರಗಿ, ಮಳಲಂತೆ ಜರಿಜರಿದು,
ಕನಸಿನಲ್ಲಿ ಕಳವಳಿಸಿ, ಆನು ಬೆರಗಾದೆ
ಆವಿಗೆಯ ಕಿಚ್ಚಿನಂತೆ ಸುಳಿಸುಳಿದು ಬೆಂದೆ;
ಆಪತ್ತಿಗೆ ಸಖಿಯರನಾರನೂ ಕಾಣೆ.
ಅರಸಿ ಕಾಣದ ತನುವ, ಬೆರಸಿ ಕೂಡದ ಸುಖವ
ಎನಗೆ ನೀ ಕರುಣಿಸಾ, ಚನ್ನಮಲ್ಲಿಕಾರ್ಜುನಾ.

## ಆಪತ್ತಿಗೆ ಸಖಿಯರನಾರನೂ ಕಾಣೆ. . .

### ಡಾ. ಉಷಾಕಿರಣ್

ಅಕ್ಕನ ಬದುಕಿನಲ್ಲಿ ಕೌಶಿಕನ ಪ್ರವೇಶ ಒಂದು ಮಹತ್ವದ ಪರಿವರ್ತನೆಯ ಘಟ್ಟ. ಭಕ್ತಿಯ ನಿಧಿಯಾಗಿದ್ದ ಆಕೆಯ ಪ್ರಶಾಂತ ಜೀವನವನ್ನು ಛಿದ್ರಗೊಳಿಸಿ ಆಧ್ಯಾತ್ಮಿಕತೆಯ ತುತ್ತತುದಿಗೆ ಕೊಂಡೊಯ್ಯುತ್ತದೆ. ಹುಟ್ಟಿದ ಮನೆ, ಬಾಲ್ಯದ ಗೆಳತಿಯರನ್ನು ಬಿಟ್ಟು ಒಂಟಿಯಾಗಿ ತನ್ನ ಗುರಿಯಾದ ಚನ್ನಮಲ್ಲಿಕಾರ್ಜುನನನ್ನು ಅರಸಿಕೊಂಡು ಹೊರಟುಬಿಡುವುದು, ವಿರಕ್ತ ಜೀವನವನ್ನು ಅಪ್ಪಿಕೊಳ್ಳುವುದು ಆಕೆ ಆಯ್ಕೆಮಾಡಿಕೊಂಡ ಹಾದಿ. ‘ನಿನ್ನ ತಾಯ್ತನವನೊಲ್ಲೆ

ಹೋಗಾ' ಎಂದು ನಿಷ್ಠುರವಾಗಿ ತನ್ನ ಪೂರ್ವಾಶ್ರಮವನ್ನು ಒಂದೇ ಬಾರಿಗೆ ತೊರೆದುಬಿಡುತ್ತಾಳೆ. ಆಧ್ಯಾತ್ಮಿಕ ಅರಸುವಿಕೆ, ಭಗವತ್ ಪ್ರೇಮದ ಅನುಸಂಧಾನದಲ್ಲಿ ಆಕೆಗೆ ಈ ಲೋಕದ ಬದುಕು ಬೇಕಾಗುವುದಿಲ್ಲ. 'ನಾನು' ಎಂಬುದನ್ನು ತೆಗೆದುಹಾಕುವ ಪ್ರಕ್ರಿಯೆಯಲ್ಲಿ ತನ್ನನ್ನು ತಾನು ಕಳೆದುಕೊಳ್ಳುವ, ಇಲ್ಲವಾಗುವಂತಹ ಅನುಭವದಲ್ಲಿ ಭಗವದನುಭೂತಿಯ ರಸಾರ್ದ್ರತೆಗೆ ಕಾತರಳಾಗುತ್ತಾಳೆ:

ಎರೆಮಣ್ಣು ಯಾವ ಹಿಡಿತಕ್ಕೂ ಸಿಗದೆ ಕರಗಿಕರಗಿ ಹೋಗುತ್ತಿರುವಂತೆ, ಮಳಲು ಒಂದೆಡೆ ನಿಲ್ಲದೆ ಜರಿದು ಜರಿದು ಹೋಗುತ್ತಿರುವಂತೆ, ಆವಿಯ ಬಿಂದು ಬಿಸಿಯನ್ನು ತಡೆಯಲಾರದೆ ಸುಳಿದು ಸುಳಿದು ಹೋಗುವಂತೆ ಅಕ್ಕನ ಮನಸ್ಸು ಚನ್ನಮಲ್ಲಿಕಾರ್ಜುನನಿಗಾಗಿ ಅರಸುತ್ತಾ ಅರಸುತ್ತಾ ಬೆಂದುಹೋಗುತ್ತಿದೆ. ಅಮೂರ್ತವಾದ ಭಾವಗಳು ಇಲ್ಲಿ ಆತ್ಮದ ಅನುಭೂತಿಯನ್ನು ಹೇಳಿಕೊಳ್ಳುವ ಪ್ರತಿಮಾವಿಧಾನದ ಸೃಷ್ಟಿಗಳಾಗಿವೆ. ಕನಸಿನಂತಹ ಒಂದು ಅನಿರ್ವಚನೀಯ ಅನುಭವದಲ್ಲಿಯೂ ಭಗವಂತನ ಅರಸುವಿಕೆಯ ಕಳವಳದಲ್ಲಿರುವಂತಹ ಭಾವಕ್ಕೆ ಅಕ್ಕನ ಮನಸ್ಸು ಕೊಂಡೊಯ್ದಿತು.

ಇಂತಹ ಭಕ್ತಿಪರವಶತೆಯಲ್ಲಿ ಬುದ್ಧಿಯ ತಾರ್ಕಿಕ ಗುಣವನ್ನು ಮೀರಿದ ಅನುಭಾವದ ಬೆರಗು ಮೂಡುತ್ತದೆ. ಈ ಬೆರಗಿನ ಅನುಭವವನ್ನು ಹೇಳಿಕೊಳ್ಳಲು ಸಖಿಯರು ಬೇಕೆನಿಸುತ್ತದೆ. ಸಖಿಯರನ್ನು ಕಾಣದ ಕಳವಳ ಒಮ್ಮೆ ಕಾಡುತ್ತದೆ. ಅನುಭಾವದ ಬೆರಗನ್ನು ಹೇಳಿಕೊಳ್ಳಲು ಬೇಕಾದ ಸಖಿಯರಿಲ್ಲವೆಂಬ ಕೊರಗನ್ನು ಅಕ್ಕ ಹೇಳಿಕೊಂಡಿದ್ದಾಳೆ. ಇದರಲ್ಲಿ ಯಾವುದೋ ಆಪತ್ತಿನ ಭಾವವೂ ಕಾಣುತ್ತದೆ. ಚನ್ನಮಲ್ಲಿಕಾರ್ಜುನ ಸಿಗುವನೋ ಇಲ್ಲವೋ ಎಂಬ ಕಳವಳವೇ ಒಂದು ಆಪತ್ತಿನ ರೂಪವಾಗಿ ಕಾಡುತ್ತದೆ. ಚನ್ನಮಲ್ಲಿಕಾರ್ಜುನನ ಸ್ವರೂಪದರ್ಶನವಿನ್ನೂ ದೊರಕದ ಬಗ್ಗೆ ಆಕೆಯ ಕಾತರ ಆಪತ್ತಿನ ರೂಪವಾಗತೊಡಗಿದೆ. ಲೌಕಿಕ ಆಪತ್ತುಗಳನ್ನು ದಾಟಿಹೋಗಿರುವ ಅಕ್ಕನಿಗೆ ತನುಭಾವವನ್ನು ದಾಟಿ ಪಡೆಯುವ ಅಲೌಕಿಕ ಅನುಭಾವದ ಪರಮಸುಖದ ಆಶಯದಲ್ಲಿ 'ಅರಸಿ ಕಾಣದ ತನುವ, ಬೆರಸಿ ಕೂಡದ ಸುಖವ ಎನಗೆ ನೀ ಕರುಣಿಸಾ' ಎಂಬ ಕಾರುಣ್ಯಭಾವದ ದರ್ಶನವಿದೆ. ತನುಭಾವ, ಮನಭಾವಗಳು ಕಳೆದುಹೋಗಿರುವಲ್ಲಿ ಅನುಭಾವದ ಸ್ಥಿತಿ ಪ್ರಕಟವಾಗಿದೆ. ಚನ್ನಮಲ್ಲಿಕಾರ್ಜುನನಲ್ಲಿ ಲೀನವಾಗುವ ಭಕ್ತಿಪರವಶತೆಯಲ್ಲಿ ಅಕ್ಕನ ಅಂತರಂಗದ ಸಂವೇದನೆಗಳು ಪ್ರಕಟಗೊಂಡಿವೆ. ಒಂದೆಡೆ ಹೃದಯದಲ್ಲಿ ಚನ್ನಮಲ್ಲಿಕಾರ್ಜುನನನ್ನು ಅರಸುವ ಭಾವ, ಮತ್ತೊಂದೆಡೆ ಭಕ್ತಿಪರವಶತೆಯಲ್ಲಿ ಕಳೆದುಹೋಗುತ್ತಿರುವ ಭಾವಗಳ ಅನಿರ್ವಚನೀಯತೆಯ ಸ್ಥಿತಿ ಅಭಿವ್ಯಕ್ತಗೊಂಡಿದೆ. ಧ್ಯಾನದ ತನ್ಮತೆಯಲ್ಲಿ ದೇಶಕಾಲಾತೀವಾದ ಮುಕ್ತಸ್ಥಿತಿಯಲ್ಲಿ ಉಂಟಾಗುವ ಬೆರಗಿನ ಅವರ್ಣನೀಯ ಗುಣದ ದರ್ಶನವಿದೆ.

ದೈವಿಕವಾದ ಆನಂದದ ಪರಮೋಚ್ಚ ಸ್ಥಿತಿಯನ್ನು ತನಗೆ ಕರುಣಿಸಬೇಕೆಂದು ಕೇಳಿಕೊಳ್ಳುವ ಅಕ್ಕನ ಬೇಡಿಕೆಯಲ್ಲಿಯೇ ಆಕೆಯ ಅನುಭಾವ ಸಾಧನೆಯ ವರ್ಣನೆ ಅಡಗಿದೆ. ಬುದ್ಧಿಭಾವಗಳನ್ನು ಮೀರಿದ ಹೃದಯದ ನಿವೇದನೆಯ ಆರ್ದ್ರಭಾವದಲ್ಲಿ ಅನುಭಾವದ ಪರಮಸುಖದ ಅನುಭೂತಿಯಿದೆ.

■



# ಬೆಳೆಯುತ್ತಾ ಬೆಳಗುವ ಅರ್ಥ

## ಡಾ. ನಾಗವೇಂದ್ರ ಸ್ವಾಮಿ ಚಿದರವಳ್ಳಿ

ಅಕ್ಕಮಹಾದೇವಿಯ ವಚನಗಳನ್ನು ಮೂರು ನೆಲೆಗಳಲ್ಲಿ ಗ್ರಹಿಸಲು ಸಾಧ್ಯವಿದೆ. ಉಡುತಡಿಯಿಂದ 'ಕಲ್ಯಾಣ' ಮಾರ್ಗದಲ್ಲಿ ಅವಳು ಎದುರಿಸಿದ ತಳಮಳ, ಲೌಕಿಕ ಸಂಕಟಗಳನ್ನು ದಿಟ್ಟತನದಿಂದ ಕೆಚ್ಚೆದೆಯಿಂದ ನಿವಾರಿಸಿಕೊಂಡದ್ದು ಒಂದು ಸ್ತರದ್ದಾಗಿದೆ. ಅಂತರಂಗದ ಸಖಿ ಅನುಭಾವದ ಆತ್ಮಸಂಗಾತ ಚೆನ್ನಮಲ್ಲಿಕಾರ್ಜುನನನ್ನು ಹುಡುಕುತ್ತಾ, ಅವನೊಂದಿಗೆ ಬೆರೆಯುತ್ತಾ ಶ್ರೀಶೈಲ ಕದಳಿವನಕ್ಕೆ ಪಯಣಿಸಿದ ಬಗೆ ಇನ್ನೊಂದು ಸ್ತರದ್ದಾಗಿದೆ. 'ಶರಣ ಸತಿ ಲಿಂಗ ಪತಿ' ಭಾವದಂತೆ ಅಲೌಕಿಕತೆಯ ದಾರ್ಶನಿಕ ಭಾವಸ್ಥಿತಿಯೊಂದಿಗೆ ಕದಳೀವನದಲ್ಲಿ ಐಕ್ಯವಾದುದು ಇನ್ನೊಂದು ಸ್ತರದ್ದಾಗಿದೆ. ಈ ಹಿನ್ನೆಲೆಯಲ್ಲಿ ಅಕ್ಕನ ಒಟ್ಟು ವಚನಗಳನ್ನು ಗ್ರಹಿಸಿ, ಪರಿಭಾವಿಸಿ ಅರ್ಥೈಸಲು ಸಾಧ್ಯವಾಗಿದೆ.

ಅಕ್ಕನ ಜೀವಿತಾವಧಿಯಲ್ಲಿ ನಡೆದಿರಬಹುದಾದ ಸ್ಥಿತ್ಯಂತರಗಳನ್ನು ಅವಳ ವಚನಗಳ ಒಟ್ಟಂದದ ಗ್ರಹಿಕೆಯ ನೆಲೆಯ ಮಾದರಿಯಾಗಿ ಈ ಆರು ಸಾಲಿನ ವಚನವನ್ನು ಕಾಣಬಹುದಾಗಿದೆ.

ಅಕ್ಕ ಲೌಕಿಕಳಾದರೂ ಅಲೌಕಿಕ ಅನುಭಾವದತ್ತ ಸದಾ ತುಡಿಯುತ್ತಿದ್ದವಳು. ಹಾಗಾಗಿಯೇ ಅಕ್ಕನ (ಅನು)ಭಾವಲೋಕದಲ್ಲಿ ಚೆನ್ನಮಲ್ಲಿಕಾರ್ಜುನನನ್ನೇ ಧ್ಯಾನಿಸುತ್ತಾ, ಆಡುತ್ತಾ, ಹಾಡುತ್ತಾ, ಹಂಬಲಿಸುತ್ತಾ, ಹುಡುಕಾಡುತ್ತಾ ಸಾಗುತ್ತಾಳೆ. ಅವನನ್ನು ಕಾಣಬೇಕೆಂಬ ಬಯಕೆಯಿಂದ ನಲಿಯುತ್ತಾ, ಮುದಗೊಳ್ಳುತ್ತಾ ಅಲೌಕಿಕದ ಇನಿಯನಲ್ಲಿ ಒಮ್ಮನದ ಏಕನಿಷ್ಠೆಯನ್ನು ಹೊಂದಿ ತನ್ನ 'ಭಾವಸ್ತರ'ದ ಬಯಲಿನಲ್ಲಿ, 'ನಾ ನಿನಗೊಲಿದೆ ನೀನು ಎನಗೊಲಿದೆ' ಎಂದು ಧನ್ಯತೆಯಿಂದ ಸಂಭ್ರಮಿಸುತ್ತಾಳೆ. ಅವಳ 'ಸಂಗಾತಿ' ಸಾಮಾನ್ಯನಲ್ಲ; ಅಲೌಕಿಕನಾದ 'ನಗೆ ಮೊಗದ ಕಂಗಳುಳ್ಳ ಕಾಂತಿಯ, ಬೆಳಗಿನ ದಿವ್ಯಸ್ವರೂಪದವ, ಅವನು ಗಂಡ ಗಂಡರನ್ನೆಲ್ಲ ಹೆಂಡ ಹೆಂಡರಾಗಿ ಆಳುವ ಗುರು-ಪರಮ ಗುರು' ಎಂದು ತನ್ನ ಸಂಗಾತಿಯನ್ನು ಬಣ್ಣಿಸುತ್ತಾ ಹೆಮ್ಮೆಯಿಂದ ಹೇಳಿಕೊಳ್ಳುತ್ತಾಳೆ. ಇಂತಹ ಸಂಗಾತಿಯನ್ನು ಕಂಡಾಗ ಅವಳು 'ಎರೆಯಂತೆ ಅಂದರೆ ಎರೆಮಣ್ಣು ನೀರಿನೊಂದಿಗೆ ಬೆರೆತಾಗ ಕರಕರಗಿ ಜಾರಿ ಹೋಗುವಂತೆ; ಎರೆಮಣ್ಣಿನಲ್ಲಿ ನೀರು ಬಿದ್ದಾಗ ಕರಗಿ ಒಂದಾಗಿ ಬೆರೆಯುವಂತೆ ತಾನು ಚೆನ್ನಮಲ್ಲಿಕಾರ್ಜುನನೆಂಬ 'ಜೊತೆಗಾರ'ನನ್ನು ಕಂಡಾಗ ಕರಗಿ ಕರಗಿ ಲೀನವಾಗಿ ಹೋದೆ. ಮಳಲು(ಮರಳು-ಉಸುಕು) ಜಾರಿ ಕಳಚಿ ಬೀಳುವಂತೆ ತಾನು ಚೆನ್ನಮಲ್ಲಿಕಾರ್ಜುನನ ಸಾಮೀಪ್ಯದಲ್ಲಿ, ಸಾನಿಧ್ಯದಲ್ಲಿ, ಉಡಿಯಲ್ಲಿ, ತೆಕ್ಕೆಯಲ್ಲಿ ಬಿದ್ದಿದ್ದೇನೆ ಎಂಬುದು ವಾಸ್ತವ ಸ್ಥಿತಿಯಾಗಿದೆ. ಇದು ಲೌಕಿಕ ಬದುಕಿನ ಸಾಮಾನ್ಯ ಯೌವನಾವಸ್ಥೆಯ ಹೆಣ್ಣೊಬ್ಬಳಿಗೆ ದಕ್ಕಿರಬಹುದಾದ ಅನುಭವದಂತಿದೆ. ಆದರೆ ಇದು ಅಕ್ಕನಿಗೆ ವಾಸ್ತವವಾದರೂ ನಿಜವಾಗಿಲ್ಲ; ಕನಸಿನಲ್ಲಿ ಕಳವಳಿಸಿದ ಸಂಗತಿಯಾಗಿದೆ. ಅಂದರೆ ವಾಸ್ತವ--ಅವಾಸ್ತವಗಳಿಂದ ಅವಳಿಗೆ ಗೊಂದಲ, ತೊಳಲಾಟವಾದರೂ ಅಲ್ಲಿನ ಕ್ರಿಯೆಗಳಿಂದ ಮುದಗೊಂಡ ವಿಸ್ಮಯ ಬೆರಗುಗಳಿಗೆ ಒಳಗಾದನೆಂದು ವಿವರಿಸಿದ್ದಾಳೆ.

ಮೂರು-ನಾಲ್ಕನೇ ಸಾಲಿನಲ್ಲಿ ಮುಂದುವರಿಯುತ್ತಾ, 'ನೊಂದವರ ನೋವ

ನೋಯದವರೆತ್ತ ಬಲ್ಲರಯ್ಯ' ಎಂಬಂತೆ ತಾನು 'ಸಂಗಾತ'ನ ಆವಿಗೆ (ಕುಲುಮೆ)ಯ ಬೆಂಕಿಯಂತೆ ಮತ್ತೆ ಮತ್ತೆ ಬೇಡವೆಂದರೂ ಅದರ ಸೆಳೆತದಿಂದ ಆ ಕಿಚ್ಚಿನಲ್ಲೇ ಸುಳಿಸುಳಿದು ಚಕ್ರಾಕಾರದಲ್ಲಿ ಎಲ್ಲಾ ಮಜ್ಜಲುಗಳಲ್ಲೂ, ಮೈಮನಗಳ ಸುಳಿಯಲ್ಲಿ ಬೆಂದಿದ್ದೇನೆ. ಇಂತಹ ಒಳಬೇಗುದಿಯ ಆಪತ್ತಿನ ಸಂಕಟದಲ್ಲಿ ಚಡಪಡಿಸುವ ವಿರಹದ ತೀವ್ರತೆ ಉತ್ಕಟ ಸ್ಥಿತಿಯಲ್ಲಿ ತೊಳಲಾಡುತ್ತಿರುವ ತನಗೆ ಧೈರ್ಯ ತುಂಬುವ, ಸಾಂತ್ವನ ಹೇಳುವ, ಸಲಹೆ ನೀಡುವ ಸಖಿಯರಾರೂ ಇಲ್ಲ ಎಂದು ತಳಮಳಗೊಳ್ಳುತ್ತಾಳೆ. ಅಂದರೆ ಮೊದಮೊದಲು ಕಿಚ್ಚಿನಿಂದ ಬೆಂದರೆ ಅನಂತರ 'ಕಿಚ್ಚಿಲ್ಲದ ಬೇಗೆ'ಯಿಂದ ಬೆಳದಿಂಗಳೇ ಬಿಸಿಲಾಗುತ್ತಿರುವ ಪರಿಯನ್ನು ಅನುಭವಿಸುತ್ತಾಳೆ.

ಮುಂದಿನ ಹಂತದ ನಾಲ್ಕು, ಐದನೇ ಸಾಲಿನಲ್ಲಿ, ಅಕ್ಕ ಸಖಿಯರು ಇರದಿದ್ದರೂ ಅದಕ್ಕೆ ಹೆದರದೆ, ಬೆದರದೆ ತನಗೆ ತಾನೇ ಆತ್ಮಸ್ಥೈರ್ಯದಿಂದ ಸಾಂತ್ವನ ಹೇಳಿಕೊಳ್ಳುತ್ತಾ, ಕಿಚ್ಚನ್ನೇ ಕೆಚ್ಚನ್ನಾಗಿಸಿಕೊಂಡು ಸಮಾಧಾನದಿಂದ ತಾನು ಹುಡುಕುತ್ತಿರುವುದು ಲೌಕಿಕ ಸಂಗಾತನಲ್ಲ; ಅಲೌಕಿಕ ಅನುಭಾವದ ಆತ್ಮಸಂಗಾತನೆಂದು ತಿಳಿಯುತ್ತಾಳೆ. ಆತ ಅಂತಿಂಥವನಲ್ಲ ಅವನನ್ನು ಎಲ್ಲೆಲ್ಲೂ ಹುಡುಕಿದರೂ ಕಾಣದ ತನುವುಳ್ಳವನು, ಅನುಭಾವದ ಅವನ ಸಂಗಡದಲ್ಲಿ ಬೆಸುಗೆಗೊಳ್ಳದಿದ್ದರೂ; ಬೆರಸಿ ಕೂಡದಿದ್ದರೂ ಸುಖವ ನೀಡುವನು. ಅಂಥವನನ್ನು 'ಕರುಣಿಸಾ' ಎಂದು ಚೆನ್ನಮಲ್ಲಿಕಾರ್ಜುನನನ್ನೇ ಕೇಳುವ, ಯಾಚಿಸುವ, ಆರ್ತತೆಯು, ಛಲವಂತಿಕೆಯೊಂದಿಗೆ ಆತ್ಮನಿವೇದನೆಯ ಪರಿಯೇ ಬೆರಗು ಹುಟ್ಟಿಸುವಂತದ್ದಾಗಿದೆ. ಈ ವಚನದಲ್ಲಿ ಗೋಚರವಾದರೂ ಕನಸಿನಂತಾಗಿದ್ದು, ಅಗೋಚರ ಸ್ಥಿತಿಯ ಆತ್ಮಸಂಗಾತಿಯನ್ನು ದಕ್ಕಿಸಿಕೊಂಡು ಸಾಕ್ಷಾತ್ಕರಿಸಿಕೊಳ್ಳಬೇಕೆಂಬ ಆಕಾಂಕ್ಷೆ ಅಕ್ಕನದ್ದಾಗಿದೆ.

ಒಟ್ಟಾರೆಯಾಗಿ ಈ ವಚನದ ಸಾಲುಗಳು ಸಾಮಾನ್ಯತೆಯಿಂದ ಅಸಮಾನ್ಯತೆಗೆ; ಲೌಕಿಕತೆಯಿಂದ ಅಲೌಕಿಕತೆಗೆ; ಸರಳತೆಯಿಂದ ಸಂಕೀರ್ಣತೆಗೆ; ಅನುಭವದಿಂದ ಅನುಭಾವದ ಕಡೆಗೆ ಬೆಳೆಯುತ್ತಾ ಒಂದು ಉತ್ಕಟತೆಯ ಉತ್ಕರ್ಷದ ಭಾವಸ್ಥಿತಿಯ ಬಿಂದುವನ್ನು ಮುಟ್ಟುತ್ತದೆ.

ತನ್ನ ಬದುಕಿನಲ್ಲಿ ನೋಡಿದ ಎರೆ, ಮಳಲು, ಕನಸು, ಆವಿಗೆ, ಕಿಚ್ಚು, ಸಖಿ ಮೊದಲಾದ ಸಾಮಾನ್ಯ ವಸ್ತು ಹಾಗೂ ಸನ್ನಿವೇಶಗಳನ್ನೇ ಕಾವ್ಯಾತ್ಮಕ ಪ್ರತಿಮೆಗಳಾಗಿ ಚಿತ್ರಿಸಿರುವ ರೀತಿಯಿಂದಾಗಿ ಅಕ್ಕನ ವಚನಗಳಿಗೆ ಕಾವ್ಯಶಕ್ತಿ ಬಂದಿದೆ. ಭಾವಸೆಲೆಯಿಂದ ಬೌದ್ಧಿಕ ನೆಲೆಯ ಹಾದಿಯಲ್ಲಿ ದಾರ್ಶನಿಕ ಔನ್ನತ್ಯವನ್ನು ಕ್ರಮಿಸುವ ವಿಸ್ಮಯ, ಅನನ್ಯತೆಯನ್ನು ಇಲ್ಲಿ ಕಾಣಬಹುದಾಗಿದೆ. ಜೊತೆಗೆ ಕರಕರಗಿ, ಜರಿಜರಿದು, ಕಳವಳಿಸಿ, ಸುಳಿಸುಳಿದು ಪದಗಳ ಅನುರಣಿಸುವಿಕೆಯು ಭಾಷಿಕ ಚೆಲುವಿನಿಂದ ಗಮನ ಸೆಳೆಯುತ್ತದೆ. ಅಕ್ಕನ ಭಾವಬಯಲಿನಲ್ಲಿ ಕನಸನ್ನು ಒಂದು ಪರಿಕ್ರಮವಾಗಿ ಬಳಸಿಕೊಳ್ಳುವ ರೀತಿಯು ವಿಶಿಷ್ಟವಾಗಿದೆ. ಮುಕ್ತತೆ, ದಿಟ್ಟತನ, ಪರಿಪಕ್ವತೆಯೊಂದಿಗೆ ಅದ್ವೈತವಾಗುತ್ತಲೇ ಅದನ್ನು ಮೀರುವ ಅಕ್ಕನ 'ಒಂದು ವಚನ ನಿರ್ವಚನ' ಎಂಬ ಚೆನ್ನಬಸವಣ್ಣನವ ವಚನ ಇಲ್ಲಿ ಸಾರ್ಥಕ್ಯ ಪಡೆಯುತ್ತದೆ.

ಇಷ್ಟಾದರೂ ಅಕ್ಕನ ವಚನಗಳನ್ನು 'ಇದಮಿತ್ಥಂ' ಎಂದು ಹೇಳಲಾಗದ ಕಾವ್ಯದಂತೆ ವಾಚ್ಯಾರ್ಥಕ್ಕಿಂತ ಸೂಚ್ಯಾರ್ಥದೊಂದಿಗೆ ಹೊಸ ಹೊಸ ಅರ್ಥವನ್ನು ಸ್ಫುರಿಸುತ್ತವೆ. ಸಹೃದಯ ಬೆಳೆದು ಮಾಗಿದಂತೆ ಅಕ್ಕನ ವಚನದ ಅರ್ಥ ವಿನ್ಯಾಸವು ಬೆಳೆಯುತ್ತಾ, ಬೆಳಗುತ್ತಾ ಹೋಗುತ್ತವೆ; ದಿವ್ಯಾನುಭವವನ್ನು ನೀಡುತ್ತವೆ. ■



# ಶರಣ ತತ್ವ

ಎಲ್ಲರು ನನ್ನವರು ಎಂದರು ಶರಣರು
ಭೇದ ಭಾವ-ಅಳಿಸಲು ಭೂಮಿಗಿಳಿದು ಬಂದರು ॥

ಅಜ್ಞಾನವ ಅಳಿಸಿದರು । ಸುಜ್ಞಾನವ ತಿಳಿಸಿದರು
ಕಾಯಕವೆ ಕೈಲಾಸ । ಎಂದು ಹೇಳಿದರು
ಲಿಂಗ ಭೇದವಿಲ್ಲವೆಂದು । ಲೋಕಕ್ಕೆ ಸಾರಿದರು
ಹರಿವ ರಕ್ತ, ಕುಡಿವ ನೀರು । ಒಂದೇ ರೀತಿ ಎಂದರು.

ಶರಣರ ನುಡಿಯನ್ನು । ವಚನವೆಂದು ಕರೆದರು
ಒಂದಗುಳು ಅನ್ನವು । ಶಿವನ ಕರುಣೆ ಎಂದರು
ದುಡಿದ ಹಣದಿ ಒಂದಾಣೆ । ಜಂಗಮರಿಗೆ ನೀಡಿದರು
ಸಕಲ ಜೀವಾತ್ಮರಿಗೆ । ಲೇಸನೇ ಬಯಸಿದರು.

ಅಕ್ಕ ಅಲ್ಲಮರು । ವೈರಾಗ್ಯ ವೀರರು
ಬಸವ ಚನ್ನಬಸವರು । ಜ್ಞಾನ ಶಿಖರ ವೇರಿದರು
ನುಡಿದಂತೆ ನಡೆದರು । ನಡೆದಂತೆ ನುಡಿದರು
ಸತ್ಯಶುದ್ಧರಾಗಿಯೇ । ಕೈಲಾಸ ವೇರಿದರು.

**ಚನ್ನಬಸವಣ್ಣ ಎಸ್.**



# ಈ ಸಂಚಿಕೆಯ ಲೇಖಕರ ವಿಳಾಸಗಳು

*** ಶ್ರೀ ಅಪ್ಪಾರಾವ್ ಅಕ್ಕೋಣಿ**
ಅಧ್ಯಕ್ಷರು
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು
"ಅಮೃತ", ಬಸವೇಶ್ವರ ಕಾಲನಿ
ಗುಲ್ಬರ್ಗ-೫೮೫ ೧೦೫
೯೪೪೮೫ ೭೦೯೮೫

*** ಡಾ. ಸಿ.ಯು. ಮಂಜುನಾಥ್**
ಸಂಪಾದಕರು, 'ಮಹಾಮನೆ'
ನಂ. ೧೪೮, ೭ನೆಯ 'ಸಿ' ಮುಖ್ಯರಸ್ತೆ
೩ನೆಯ ಅಡ್ಡರಸ್ತೆ, ಕಲ್ಯಾಣ ಗೃಹ
ನಿರ್ಮಾಣದ ಬಡಾವಣೆ, ಹಂಪಿನಗರ
ಬೆಂಗಳೂರು – ೫೬೦ ೧೦೪
೯೮೪೫೦ ೩೧೬೯೨

*** ಶ್ರೀ ಬಿದರಹಳ್ಳಿ ನರಸಿಂಹಮೂರ್ತಿ**
'ಅನಿಮಿಷ', ಕ್ರಾಸ್-೭,
ದುರ್ಗಿಗುಡಿ ಹಂತ ೧
ಹೊನ್ನಾಳಿ – ೫೭೭ ೨೧೭
ದಾವಣಗೆರೆ ಜಿಲ್ಲೆ
೯೮೮೦೧ ೩೦೨೦೩

*** ಡಾ. ಬಿ. ನಂಜುಂಡಸ್ವಾಮಿ**
ಪಂಡಿತ್ ತಾರಾನಾಥ್
ಆಯುರ್ವೇದ ಚಿಕಿತ್ಸಾಲಯ
ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್
ಬಿ.ಹೆಚ್. ರಸ್ತೆ,
ತುಮಕೂರು – ೫೭೨ ೧೦೨
೯೮೮೦೯ ೯೬೧೯೬

*** ಶ್ರೀ ಚಂದ್ರಶೇಖರ ಕಗ್ಗಲ್ಲಗೌಡ್ರು**
ಪದವೀಧರ ಪ್ರಾಥಮಿಕ ಶಿಕ್ಷಕ
ಸಂಚಿಯ ಹೊನ್ನಮ್ಮ ಸ್ಮಾರಕ
ಸರ್ಕಾರಿ ಬಾಲಕಿಯರ ಪ್ರೌಢಶಾಲೆ,
ಹಳೆನಗರ,ಭದ್ರಾವತಿ – ೫೭೭ ೩೦೧
ಶಿವಮೊಗ್ಗ ಜಿಲ್ಲೆ
೯೩೪೨೯ ೮೬೯೦೧

*** ಎಂ. ಪ್ರಸನ್ನಕುಮಾರ್**
ನಂ. ೧೦೨, ೪ನೇ ಮುಖ್ಯರಸ್ತೆ
೧೨ನೆ ಬ್ಲಾಕ್, ನಾಗರಬಾವಿ ೨ನೇ ಹಂತ
ಬೆಂಗಳೂರು – ೫೬೦ ೦೭೨
೯೮೮೦೯ ೩೯೯೦೬

*** ಪ್ರೊ. ಎಸ್. ಬಸವರಾಜು**
ಫ್ಲ್ಯಾಟ್ ನಂ. ೩೦೧, 'ಬಿ' ಬ್ಲಾಕ್
ಅಭಿಸಾಯಿ ಸಂತೃಪ್ತಿ
ವಿಶ್ವೇಶ್ವರಯ್ಯ ನಗರ, ೮ನೆ ಬ್ಲಾಕ್,
ಬೆಂಗಳೂರು – ೫೬೦ ೦೯೧
೯೯೮೦೪ ೦೫೪೬೯

*** ಡಾ. ವಜ್ರೇಶ್ವರಿ ಎಸ್. ಮೂರ್ತಿ**
'ಮೌನಿ', ನಂ.೧೬೬, ೭ನೆ ಮುಖ್ಯರಸ್ತೆ
೮ನೆ ಅಡ್ಡರಸ್ತೆ, ಮಲ್ಲೇಶ್ವರಂ
ಬೆಂಗಳೂರು – ೫೬೦ ೦೦೩
೯೫೩೫೩ ೩೫೯೫೬

*** ಡಾ. ಉಷಾಕಿರಣ್**
ವಿಶ್ರಾಂತ ಪ್ರಾಧ್ಯಾಪಕರು
ನಂ. ೨೦೩,
ಸೌಂದರ್ಯ ಲಿಂಕ್ಸ್ ಅಪಾರ್ಟ್‌ಮೆಂಟ್
ಲಿಂಕ್ ರಸ್ತೆ, ಶೇಷಾದ್ರಿಪುರಂ,
ಬೆಂಗಳೂರು – ೫೬೦ ೦೨೦
೯೮೪೫೨ ೪೪೦೯೭

*** ಡಾ. ನಾಗವೇಂದ್ರ ಸ್ವಾಮಿ ಚಿದರವಳ್ಳಿ**
ನಂ. ೧೯೭, ೬ನೆ ಮುಖ್ಯರಸ್ತೆ
ಮಹಾಗಣಪತಿ ನಗರ,
ರೇವಾ ಸ್ಕೂಲ್ ಸಮೀಪ,
ಬೆಂಗಳೂರು – ೫೬೦ ೦೧೦
೯೪೪೮೦ ೧೨೨೬೯

*** ಶ್ರೀ ಚನ್ನಬಸವಣ್ಣ ಎಸ್.**
ಶಾಂತಿನಗರ, ಪಾವಗಡ
ತುಮಕೂರು ಜಿಲ್ಲೆ – ೫೬೧ ೨೦೨
೯೪೪೯೨ ೩೯೬೫೦



# ಕ್ಷೇತ್ರ, ವಾರ್ತೆಗಳು



ಶಹಾಪುರ: ವಚನೋತ್ಸವ ಕಾರ್ಯಕ್ರಮ
ವೇದಿಕೆಯಲ್ಲಿ: ಅಪ್ಪಾರಾವ ಅಕ್ಕೋಣಿ, ಸುಮಿತ್ರ, ಸಿದ್ದಪ್ಪ ಶರಣಪ್ಪ ಹೊಟ್ಟಿ, ನಾಗಣ್ಣ ಗಣಜಲಖೇಡ, ಪ್ರಕಾಶ ಅಂಗಡಿ ಕನ್ನೆಳ್ಳಿ, ಲಿಂಗಣ್ಣ ಪಡಶೆಟ್ಟಿ, ಸಿದ್ಧಲಿಂಗಣ್ಣ ಆನೆಗುಂದಿ, ರವೀಂದ್ರನಾಥ ಪತ್ತಾರ, ಡಾ. ದೇವೀಂದ್ರಪ್ಪ ಹಡಪದ ಸಗರ



ನವಲಗುಂದ: ವಚನ ಕಾರ್ತಿಕ ಹಾಗೂ ಶರಣಶ್ರೀ ಪ್ರಶಸ್ತಿ ಪ್ರದಾನ ಹಾಗೂ ಡಾ॥ ಎಂ.ಎಂ.ಕಲಬುರ್ಗಿಯವರ ವಚನವರ್ಷ ಪುಸ್ತಕವನ್ನು ಪ್ರಾಥಮಿಕ, ಪ್ರೌಢ ಶಾಲಾ ಗ್ರಂಥಾಲಯಕ್ಕೆ ಕೊಡಮಾಡಲಾಯಿತು ದಿನಾಂಕ: ೨೯.೧೧.೨೦೧೯
ವೇದಿಕೆಯಲ್ಲಿ: ಡಾ॥ ಎಫ್.ಡಿ.ಹಳ್ಳಿಕೇರಿ, ಡಾ॥ ಎ.ಸಿ.ವಾಲಿ ಮಹಾರಾಜರು, ಎನ್.ಎಂ. ಯಲಬುರ್ಗಿ



ಬಾಗಲಕೋಟೆ: ಲಿಂ. ಶ್ರೀ ಬಸವಯ್ಯ ಕುಮಾರಯ್ಯ ವಿರಕ್ತಮಠ ಹಾಗೂ ಲಿಂ. ಶ್ರೀಮತಿ ಪ್ರಮೀಳಾ ಗುರುಪಾದಯ್ಯ ಹಿರೇಮಠ ಇವರ ಸ್ಮರಣಾರ್ಥ ದತ್ತಿ ಉಪನ್ಯಾಸ. ದಿನಾಂಕ:೧೯.೧೧.೨೦೧೯
ವೇದಿಕೆಯಲ್ಲಿ: ಚಂದ್ರಶೇಖರ ಶೆಟ್ಟರ, ಡಾ.ಕೆ.ಬಿ. ವಿರಕ್ತಮಠ, ಎ.ಎಸ್. ಪಾವಟೆ, ಡಾ.ವ್ಹಿ.ಎ. ಬೆನಕನಾಳ, ಬಸವರಾಜ ಮುಕ್ಕುಪ್ಪಿ, ಬಸವರಾಜ ಹಿರೇಮಥ, ಡಾ.ಬಿ.ಎಸ್. ಬಿರಾದಾರ



ವಿಜಯಪುರ: ಲಿಂ. ಸಿದ್ರಾಮಪ್ಪ ನಾಗಪ್ಪ ಹೋಟಗಿ ಮತ್ತು ಲಿಂ. ಶರಣಪ್ಪ ಮಲಕಪ್ಪ ಮಂಗಾನವರ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೦೯.೧೨.೨೦೧೯, ವೇದಿಕೆಯಲ್ಲಿ: ದೊಡ್ಡಣ್ಣ ಭಜಂತ್ರಿ, ಮ.ಗು. ಯಾದವಾಡ, ಎಚ್.ಎಸ್. ಜಂಗಮಶೆಟ್ಟಿ, ಹೊನ್ನಪ್ಪ ಹೋಟಗಿ, ಸಾಹೇಬಗೌಡ ಬಸರಕೋಡ, ಸಿ.ಎಂ. ಹಿರೇಮಠ್



ಹಾನಗಲ್ಲ: ಪುಟ್ಟರಾಜ ಗವಾಯಿಗಳವರ ಜನ್ಮಭೂಮಿ ಕಾಡಶೆಟ್ಟಿಹಳ್ಳಿಯಲ್ಲಿ ನಡೆದ ವಚನ ಸಂಗೀತ ಕಾರ್ಯಕ್ರಮ, ದಿನಾಂಕ:೦೭.೧೨.೨೦೧೯, ವೇದಿಕೆಯಲ್ಲಿ: ನರಸೀ ಕೋಮಾರ್, ಮಾರುತಿ ಶಿಡ್ಲಾಪೂರ, ರೇಖಾ ಶೆಟ್ಟರ, ಅಕ್ಕಮ್ಮ ಕುಂಬಾರಿ, ಬಸವರಾಜ ಬೂದಿಹಾಳ, ಎಸ್.ವಿ. ಹೊಸಮನಿ, ಆನಂದ ದೊಡ್ಡಕುರುಬರ, ವಸಂತ ಚಿಕ್ಕಣ್ಣನವರ, ಮಾರುತಿ ಕೊಡವರ



ದಾವಣಗೆರೆ: ಶ್ರೀಮತಿ ಮಲಹಾಳರ ಗೌರಮ್ಮ ನಾಗಪ್ಪ ತಿಪ್ಪಗೊಂಡನಹಳ್ಳಿ ದತ್ತಿ, ಶ್ರೀಮತಿ ಜಿ.ನಿಂಗಮ್ಮ ಮತ್ತು ಲಿಂ.ನಾಗನಗೌಡ್ರು ದತ್ತಿ ಮತ್ತು ನುಗ್ಗಿಹಳ್ಳಿ ಲಿಂ. ಮಠದ ಶಿವರುದ್ರಯ್ಯ ಮತ್ತು ಲಿಂ. ಗಂಗಮ್ಮ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ;-೦೯-೧೨-೨೦೧೯. ಚಿತ್ರದಲ್ಲಿ: ಎಸ್.ಟಿ. ಶಾಂತಗಂಗಾಧರ, ವಿಜಯಕುಮಾರ್ ಹೆಚ್. ಚಿಂದಿ, ಆಣಬೇರು ರಾಜಣ್ಣ, ಚಿಕ್ಕೋಳ್ ಈಶ್ವರಪ್ಪ, ಎ.ಸಿ. ಶಶಿಕಲಾ ಶಂಕರಮೂರ್ತಿ, ಪ್ರೇಮಾ ಸೋಮೇಶ್ವರಪ್ಪ, ಪಂಕಜಾ ದಯಾನಂದ






ಮುದ್ದೇಬಿಹಾಳ: ನಾಡೋಜ ಡಾ. ಎಂ.ಎಂ. ಕಲಬುರ್ಗಿ ಜಯಂತ್ಯೋತ್ಸವ ಕಾರ್ಯಕ್ರಮ ಮತ್ತು ಲಿಂ. ಅಮರೇಶ ನಾಲತವಾಡ ಹಾಗೂ ಲಿಂ. ಶ್ರೀಮತಿ ದಾನಮ್ಮ ಲಿಂ. ಶಿದ್ಧಲಿಂಗಪ್ಪಾ ಗಮ್ಮೂಲವರ ಸ್ಮರಣಾರ್ಥ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೨೮.೧೧.೨೦೧೯, ವೇದಿಕೆಯಲ್ಲಿ: ಬಾಪುಗೌಡ ಪಾಟೀಲ, ಶರಣಗೌಡ ಪಾಟೀಲ, ಬಸವರಾಜ ನಾಲತವಾಡ, ಅಶೋಕ ಮಣಿ, ಎನ್. ನರಸಿಂಹಮೂರ್ತಿ, ಎಸ್.ಬಿ. ಬಂಗಾರಿ, ಎಸ್.ಎಸ್. ಕರಡ್ಡಿ



ತುಮಕೂರು: ಶ್ರೀಮತಿ ಕಮಲಮ್ಮ ಹೆಚ್ ಸಿ ಶಿವಣ್ಣ ದತ್ತಿ, ದಿನಾಂಕ:೧೫.೧೨.೨೦೧೯ ವೇದಿಕೆಯಲ್ಲಿ: ಎಂ. ಜಿ. ಸಿದ್ದರಾಮಯ್ಯ, ಹಂ. ಸಿ. ಕುಮಾರಸ್ವಾಮಿ, ಮಿಮಿಕ್ರಿ ಈಶ್ವರಯ್ಯ, ಎಸ್ .ಕುಮಾರಸ್ವಾಮಿ, ರಜನಿ ಗೀತೇಶ್, ಪಟೇಲ್ ಶಿವು, ಪುಟಾಣಿಗಳಾದ ಚನ್ನಬಸವಣ್ಣ, ಅಕ್ಕ ಮಹಾದೇವಿ, ಮುಕ್ತಾಯಕ್ಕ, ನೀಲಾಂಬಿಕೆ ಚಿರಂತನ




ಬಳ್ಳಾರಿ: ಲಿಂ. ಸಿ.ಎಂ. ವೀರಭದ್ರಯ್ಯ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೩೦.೧೧.೨೦೧೯ ವೇದಿಕೆಯಲ್ಲಿ: ಅಮೋಘ, ಸತ್ಯನಾರಾಯಣ, ಸಿಸ್ಟರ್ ದಿವ್ಯ, ನಿಸ್ಟರ್ ಝಾನ್ಸಿ, ಕೆ.ಬಿ. ಸಿದ್ಧಲಿಂಗಪ್ಪ, ಸಿ.ಎಂ. ಮೃತ್ಯುಂಜಯ



ದಾವಣಗೆರೆ ಕದಳಿ ಮಹಿಳಾ ವೇದಿಕೆ: ಲಿಂ. ದಾವಣಗೆರೆ ರಾಜಶೇಖರಯ್ಯ ಮತ್ತು ಲಿಂ. ದಯಾನಂದ ದತ್ತಿ ಮತ್ತು ಲಿಂ. ಗೌಡ್ರ ಕಾಳಮ್ಮ ಮತ್ತು ಲಿಂ. ತೊರಿಯಪ್ಪ ದತ್ತಿ ಮತ್ತು ಲಿಂ. ಕೊಂಡಪಳ್ಳಿ ಪಾಪಮ್ಮ ಮತ್ತು ಲಿಂ. ಕೊಂಡಪಳ್ಳಿ ಹನುಮಂತಪ್ಪ ದತ್ತಿ ಉಪನ್ಯಾಸ ಕಾರ್ಯಕ್ರಮ,ದಿನಾಂಕ:೧೯.೧೧.೨೦೧೯
ವೇದಿಕೆಯಲ್ಲಿ: ಕಮಲಮ್ಮ, ಪಲ್ಲವಿಪಾಟೀಲ್, ದುರುಗಪ್ಪ ಡಿ. ಕಿರುವಾಡಿ ಗಿರಿಜಮ್ಮ, ಬಿ.ಹೆಚ್. ತಿಪ್ಪೇಸ್ವಾಮಿ




ಉಡುಪಿ: ಶರಣ ಚಿತ್ರಕಲಾ ಪ್ರದರ್ಶನ ಮತ್ತು ವಚನ ವಿಶ್ಲೇಷಣೆ ಕಾರ್ಯಕ್ರಮ, ದಿನಾಂಕ:೧೯.೧೨.೨೦೧೯
ವೇದಿಕೆಯಲ್ಲಿ: ಕೆ.ಪಿ. ರಾವ್, ಡಾ. ಮಧುರಾಜ್, ನಟರಾಜ ಉಪಾಧ್ಯಾಯ, ಡಾ.ನಿರಂಜನ ಯು.ಸಿ., ಕೊಡಂಚ



ಇಂಡಿ: ಪದಗ್ರಹಣ ಹಾಗೂ ಲಿಂ. ಜಾನನಗೌಡ ಕಲ್ಲನಗೌಡ ಪಾಟೀಲ ಸಾ॥ ಬೆನಕನಹಳ್ಳಿ ದತ್ತಿ ಉಪನ್ಯಾಸ ಕಾರ್ಯಕ್ರಮ, ದಿನಾಂಕ:೧೮.೧೧.೨೦೧೯, ವೇದಿಕೆಯಲ್ಲಿ: ಬಸವರಾಜ ಎ. ದೇವರ, ಪ್ರಭಾಕರ ಎಸ್. ಬಗಲಿ, ಮ.ಗು. ಯಾದವಾಡ, ಜಂಬುನಾಥ ಕಂಚ್ಯಾಣಿ, ಎಂ.ಬಿ. ಭೈರಜಿ, ಅಂಬಣ್ಣ ಸುಣಗಾರ, ಗಂಗೂಬಾಯಿ ಸಿ. ಗಲಗಲಿ





ಚಿಂಚೋಳಿ: ಚಿಂಚೋಳಿ ತಾಲೂಕು ಶರಣ ಸಾಹಿತ್ಯ ಪರಿಷತ್ತಿನ ಘಟಕ ಉದ್ಘಾಟನೆ, ದಿನಾಂಕ:೧೩.೧೨.೨೦೧೯
ವೇದಿಕೆಯಲ್ಲಿ: ಶಿವರಂಜನ್ ಸತ್ಯಂಪೇಟ, ಕುಪೇಂದ್ರ ಪಾಟೀಲ, ಬಸವರಾಜ ಐನೋಳಿ, ಮಲ್ಲಿಕಾರ್ಜುನ ಪಾಲಮೂರ, ಶರಣಯ್ಯಾ ಸ್ವಾಮಿ ಅಲ್ಲಪೂರ, ಮುತ್ತುಶ್ರೀ ಐನೋಳಿ, ಚನ್ನವೀರ ಕಲ್ಲೂರ, ಪುಂಡಲೀಕ ಸನಾದಿ, ಕಾಶೀನಾಥ ಮಡಿವಾಳ




ಮೈಸೂರು: ರಸಪ್ರಶ್ನೆ ಕಾರ್ಯಕ್ರಮ, ದಿನಾಂಕ:೧೪.೧೨.೨೦೧೯
ವೇದಿಕೆಯಲ್ಲಿ: ಸುಹಾಸ ಪ್ರಭು, ಕೃಷ್ಣಸ್ವಾಮಿ, ಗೊ.ರು. ಪರಮೇಶ್ವರಪ್ಪ, ಮಹಾದೇವಪ್ಪ, ಶಾರದಾ ಶಿವಲಿಂಗಸ್ವಾಮಿ, ಸುಧಾ, ಸವಿತಾ ನಟರಾಜ್, ಧನ್ಯ, ಸತ್ಯಮೂರ್ತಿ



ಬೆಂಗಳೂರು: ಲಿಂ. ಚಂದ್ರಪ್ಪ ವೀರಪ್ಪ ದತ್ತಿ ಉಪನ್ಯಾಸ, ದಿನಾಂಕ: ೨೨.೧೨.೨೦೧೯
ವೇದಿಕೆಯಲ್ಲಿ: ತೃಪ್ತಿ, ಜಿ.ಪಿ. ಚಿಕ್ಕರಿಯಪ್ಪ, ವಿ.ಎಸ್. ಹಿರೇಮಠ್, ಕೆ.ವಿ. ನಾಗರಾಜಮೂರ್ತಿ, ಜಿ. ರುದ್ರಪ್ಪ, ಸಿ. ವಸಂತರಾಜು

*With best Compliments From*

# Ramanashree Group

Visit us at Website: www.ramanashree.com






## ರಮಣಶ್ರೀ ರಿಚ್ಮಂಡ್

ನಂ. 16, ರಾಜಾರಾಮ್ ಮೋಹನ್‌ರಾಯ್ ರಸ್ತೆ, ಬೆಂಗಳೂರು– 560 025
ದೂರವಾಣಿ: 080–4135 0000
E-mail: reserve@ramanashree.com

## ರಮಣಶ್ರೀ ಕ್ಯಾಲಿಫೋರ್ನಿಯ ರೆಸಾರ್ಟ್

ದೊಡ್ಡಬಳ್ಳಾಪುರ ರಸ್ತೆ, ಯಲಹಂಕ, ಬೆಂಗಳೂರು – 560 064
ದೂರವಾಣಿ: 080–4040 0900
E-mail: resort@ramanashree.com

## ರಮಣಶ್ರೀ ಬ್ರಂಟನ್

ನಂ. 2/1, ಬ್ರಂಟನ್ ರಸ್ತೆ, ಎಂ.ಜಿ.ರಸ್ತೆ ಹತ್ತಿರ,
ಬೆಂಗಳೂರು – 560 001
ದೂರವಾಣಿ: 080–4665 9000
E-mail: brunton@ramanashree.com

## ರಮಣಶ್ರೀ ಉದಯ ಎಜುಕೇಷನ್ ಸೊಸೈಟಿ (ರಿ.)

ನಂ. 14, 24ನೇ ಕ್ರಾಸ್, ಕಿಲಾರಿ ರಸ್ತೆ
ಬೆಂಗಳೂರು – 560 052. ದೂರವಾಣಿ 080–2226 7281

## ರಮಣಶ್ರೀ ಉದಯ ಎಜುಕೇಷನ್ ಸೊಸೈಟಿ (ರಿ.)

ರಮಣಶ್ರೀ ಅಕಾಡೆಮಿ ಆಫ್ ಮ್ಯಾನೇಜ್‌ಮೆಂಟ್
ನಂ. 14, 18ನೇ ಕ್ರಾಸ್, 18ನೇ ಮೈನ್, ಎಂ.ಸಿ. ಲೇಔಟ್, ವಿಜಯನಗರ
ಬೆಂಗಳೂರು– 560 040. ದೂ:080–2335 3571 / 2335 3220

## ಶ್ರೀಮತಿ ಮಣಿ ಷಡಕ್ಷರಿ ಕಲ್ಯಾಣ ಮಂದಿರ

ನಂ. 307, ಆರ್.ಬಿ.ವಿ.ಜಿ.ಸಿ. ಚಾರಿಟೀಸ್ ಕಾಂಪೌಂಡ್, ತಿಮ್ಮಯ್ಯ ರಸ್ತೆ
ಆಫ್ ಕ್ವೀನ್ಸ್ ರಸ್ತೆ, ಬೆಂಗಳೂರು – 560 052. ದೂ: 080–2286 1346

## ರಮಣಶ್ರೀ ಸಭಾಂಗಣ

ನಂ. 16/ಎ, ಮಿಲ್ಲರ್ ಟ್ಯಾಂಕ್ ಬಂಡ್ ರಸ್ತೆ, ವಸಂತನಗರ
ಬೆಂಗಳೂರು–560 052. ದೂ: 080–2228 4494



# ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು (ರಿ.) ಮೈಸೂರು


ಆಡಳಿತ ಕಾರ್ಯಾಲಯ: ಜಗದ್ಗುರು ಶ್ರೀ ಶಿವರಾತ್ರೀಶ್ವರ ವೃತ್ತ, ೧ನೆಯ ಮುಖ್ಯರಸ್ತೆ
೮ನೆಯ ವಿಭಾಗ, ಜಯನಗರ, ಬೆಂಗಳೂರು – ೫೬೦ ೦೭೦,
ದೂರವಾಣಿ:೦೮೦- ೨೯೭೦೧೨೫ e-mail: abssp.reg@gmail.com


## ಸದಸ್ಯತ್ವ ಅಪೇಕ್ಷಾ ಪತ್ರ

ಅಧ್ಯಕ್ಷರು
ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಅವರಿಗೆ
ಮಾನ್ಯರೆ,

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಸದಸ್ಯನಾಗಬಯಸಿ, ಕೆಳಗಿನ ವಿವರಗಳನ್ನು ಕಳಿಸಿದ್ದೇನೆ. ನನ್ನನ್ನು ____________ನೆಯ ವರ್ಗದ ಸದಸ್ಯನನ್ನಾಗಿ ಸೇರಿಸಿಕೊಳ್ಳಬೇಕೆಂದು ಕೋರುತ್ತೇನೆ. ಈ ಬಗ್ಗೆ ಸದಸ್ಯತ್ವಕ್ಕೆ ೫೦೦ರೂ. ಮತ್ತು ಪರಿಷತ್ತಿನ ಮಾಸಪತ್ರಿಕೆ ಮಹಾಮನೆಯ ಆಜೀವ ಸದಸ್ಯತ್ವ ಫೀ ೧,೦೦೦ರೂ. ಒಟ್ಟು ೧,೫೦೦ರೂ.ಗಳನ್ನು ನಗದು / ಹುಂಡಿ / ಮನಿ ಆರ್ಡರ್ / ಪೋಸ್ಟಲ್ ಆರ್ಡರ್ ಮೂಲಕ ಸಲ್ಲಿಸಿದ್ದೇನೆ. ಪರಿಷತ್ತಿನ ನಿಬಂಧನೆಗಳಿಗೆ ನಾನು ಬದ್ಧನಾಗಿರುತ್ತೇನೆ. ಮಹಾಮನೆಯನ್ನು ಕೆಳಕಂಡ ವಿಳಾಸಕ್ಕೆ ಕಳುಹಿಸಬೇಕಾಗಿ ವಿನಂತಿ.

ತಮ್ಮ ವಿಶ್ವಾಸಿ

ಸಹಿ

ದಿನಾಂಕ: ____________

ಹೆಸರು ____________
ವಯಸ್ಸು____________ಉದ್ಯೋಗ____________
ವಿಳಾಸ____________
____________
____________
____________ ಪಿನ್ ಕೋಡ್ ____________
ಇಬ್ಬರುಸದಸ್ಯರ (೧)____________
ಅನುಮೋದನೆ (೨)____________

* ವಿವರಗಳಿಗೆ ಪುಟ ತಿರುಗಿಸಿ ಓದಿ.

### ಸದಸ್ಯತ್ವವನ್ನು ಒಪ್ಪಿಕೊಳ್ಳಲಾಗಿದೆ

ರಶೀದಿ ನಂ. ____________
ದಿನಾಂಕ: ____________

ಅಧ್ಯಕ್ಷರ ಸಹಿ

## ಸದಸ್ಯತ್ವ ಅಪೇಕ್ಷಾ ಪತ್ರ

| | |
|---|---|
| ೧. ಮಹಾಪೋಷಕರು | ರೂ. ೨೫,೦೦೦-೦೦ |
| ೨. ಪೋಷಕರು | ರೂ. ೧೦,೦೦೦-೦೦ |
| ೩. ದಾತೃಗಳು | ರೂ. ೫,೦೦೦-೦೦ |
| ೪. ಆಜೀವ ಸದಸ್ಯರು | ರೂ. ೫೦೦-೦೦ |

ಮೇಲಿನ ವಿಶೇಷ ವರ್ಗಗಳ ಸದಸ್ಯರು ತಮ್ಮ ಪೂರ್ಣ ಚಂದಾ ಹಣವನ್ನು ಒಂದೇ ಕಂತಿನಲ್ಲಿ ಸಲ್ಲಿಸತಕ್ಕದ್ದು. ಚಂದಾ ಹಣವನ್ನು ಪೂರ್ತಿಯಾಗಿ ಸಲ್ಲಿಸಿದವರಿಗೆ ಮಾತ್ರ ಸದಸ್ಯತ್ವದ ಪೂರ್ಣ ಹಕ್ಕುಬಾಧ್ಯತೆಗಳು ಇರುತ್ತವೆ.

**ಮಹಾಮನೆ ಆಜೀವ ಸದಸ್ಯತ್ವ ಶುಲ್ಕ ೧, ೦೦೦ರೂ. ಮಾತ್ರ**

**ಸದಸ್ಯ ಸಂಸ್ಥೆಗಳು:**

| | |
|---|---|
| ೧. ಪೋಷಕ ಸಂಸ್ಥೆಗಳು | ರೂ.೨೦.೦೦೦-೦೦ |
| ೨. ಆಜೀವ ಸದಸ್ಯರು | ರೂ.೧೦,೦೦೦-೦೦ |

ಚಂದಾ ಹಣವನ್ನು **"ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು"** ಈ ಹೆಸರಿಗೆ ಬರೆದ ಡಿ.ಡಿ. / ಮನಿ ಆರ್ಡರ್ / ನಗದು ರೂಪದಲ್ಲಿ ನೀಡಿ ಅಧಿಕೃತ ರಸೀದಿ ಪಡೆಯಬಹುದು.

### ಸದಸ್ಯತ್ವದ ಹಕ್ಕುಬಾಧ್ಯತೆಗಳು

೧. ಪರಿಷತ್ತಿನ ಸಮ್ಮೇಳನ, ಉಪನ್ಯಾಸ ಮುಂತಾದ ಸಾರ್ವಜನಿಕ ಕಾರ್ಯಕ್ರಮಗಳು, ಪುಸ್ತಕ ಭಂಡಾರ, ವಾಚನಾಲಯ ಮತ್ತು ಪ್ರಕಟಣೆಗಳು – ಇವುಗಳ ಪ್ರಯೋಜನವನ್ನು ನಿಯಮಾನುಸಾರ ಪಡೆದುಕೊಳ್ಳಲು ಸದಸ್ಯರಿಗೆ ಅಧಿಕಾರವಿರುತ್ತದೆ.

೨. ಪರಿಷತ್ತಿನ ಸರ್ವಸದಸ್ಯರ ಸಭೆಗಳಲ್ಲಿ ಪಾಲುಗೊಳ್ಳುವ, ಕೈಗೊಳ್ಳಬೇಕಾದ ತೀರ್ಮಾನಗಳ ಬಗ್ಗೆ ನಿಯಮಾನುಸಾರ ಮತ ಕೊಡುವ ಮತ್ತು ಚುನಾವಣೆಗಳಲ್ಲಿ ಅಭ್ಯರ್ಥಿಗಳಾಗುವ ಅಧಿಕಾರವಿರುತ್ತದೆ.



## ಹಾಸನ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು




ಜಿಲ್ಲಾ ಕದಳಿ ಮಹಿಳಾ ಸಮಾವೇಶ, ದಿನಾಂಕ:೧೪.೧೨.೨೦೧೯
ವೇದಿಕೆಯಲ್ಲಿ: ಕೆ.ಎಸ್. ಲಿಂಗೇಶ್, ಸುಶೀಲಾ ಸೋಮಶೇಖರ್, ತೀರ್ಥಕುಮಾರಿ, ಎಂ.ಆರ್. ವೆಂಕಟೇಶ ಸಫಾಯಿ ಕರ್ಮಚಾರಿ, ಎಂ.ಆರ್. ವೆಂಕಟೇಶ್, ಸಿ.ಎಂ. ನಿಂಗರಾಜು, ಹೇಮಾವತಿ ಮಂಜುನಾಥ್, ಹೇಮಾ ವಿರೂಪಾಕ್ಷ, ಹೆತ್ತೂರು ನಾಗರಾಜ್

## ಶಿವಮೊಗ್ಗ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು




**ಹೊಸನಗರ ತಾಲೂಕು ಘಟಕದ ೬ನೇ ಶರಣ ಸಾಹಿತ್ಯ ಸಮ್ಮೇಳನ,** ದಿನಾಂಕ:೧೫.೧೨.೨೦೧೯
ಉದ್ಘಾಟನೆ: ಮಳಲಿ ಮಠದ ಶ್ರೀಗಳು ಮತ್ತು ಮೂಲೆಗದ್ದೆ ಮಠದ ಶ್ರೀಗಳು
ಸರ್ವಾಧ್ಯಕ್ಷರು: ಬಿ.ಆ. ಇಂದ್ರಮ್ಮ ಭೀಮರಾಜ್, ವೇದಿಕೆಯಲ್ಲಿ: ಆರಗ ಜ್ಞಾನೇಂದ್ರ, ಜರಗನಹಳ್ಳಿ ಶಿವಶಂಕರ್, ಹೆಚ್.ಎನ್. ಮಹಾರುದ್ರ, ಆ.ಗಿ. ರೇವಣಪ್ಪಗೌಡ, ಆಲುವಳ್ಳಿ ವೀರೇಶ್ ಎ.

Magazine Registration No. RNI 68294/97
"REGISTERED" Postal Registration No. RNP/KA/BGS-167/2018-2020
Licensed to post without Pre Payment, License No. WPP-119

Posted at Registered News Paper Mailing Center, Bangalore P.S.O. Mysore Road-560 026 on 5th of every Month

**MAHAAMANE**
Monthly Magazine

Total Pages 76 (Including Cover Pages)

Date of Publication
1 January 2020

## ಶಿವಮೊಗ್ಗ ಜಿಲ್ಲಾ ಶರಣ ಸಾಹಿತ್ಯ ಪರಿಷತ್ತು




ಶಿವಮೊಗ್ಗ ತಾಲ್ಲೂಕು ೨ನೆ ಶರಣ ಸಾಹಿತ್ಯ ಸಮ್ಮೇಳನ, ದಿನಾಂಕ:೧೪.೧೨.೨೦೧೯
ವೇದಿಕೆಯಲ್ಲಿ: ಪ್ರೊ. ಕೆ. ಓಂಕಾರಪ್ಪ, ಪ್ರೊ. ಸಿ.ಯು. ಸೋಮಶೇಖರ್,
ಡಾ. ಮಲ್ಲಿಕಾರ್ಜುನ ಮುರುಘರಾಜೇಂದ್ರ ಮಹಾಸ್ವಾಮಿಗಳು, ಆರ್.ಎಸ್. ಸ್ವಾಮಿ, ಹೆಚ್.ಎನ್. ಮಹಾರುದ್ರ
ಕತ್ತಿಗೆ ಚೆನ್ನಪ್ಪ, ಪಿ. ರುದ್ರೇಶ್, ಪುಷ್ಪ ಹಾಲಪ್ಪ, ಯಶೋದ ಮಲ್ಲಿಕಾರ್ಜುನ

Published by: Go.Ru. Channabasappa, Akhila Bharatha Sharana Sahitya Parishat (Regd.)
Jagadguru Sri Shivarathrishwara Circle, 1st Main, 8th Block, Jayanagar, Bengaluru - 560 070
Printed at : Svan Printers, No. 134/9/5, 2nd Main Road,
10th Cross, Chamarajpet, Bengaluru-560 018

E-mail: abssp.reg@gmail.com
mahamanemagazine@gmail.com

Editor : Dr. C.U. Manjunath